| ಕ್ರ ಸಂ. | ಸರ್ವೆ ನಂ | ಖಾತೆದಾರರ ಹೆಸರು / ಅನುಭವದಾರರ ಹೆಸರು | ವಿಸ್ತೀರ್ಣ | | | ತರಹೆ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|---|
| | | | ಐನ್ ಎ. ಗು | ಖರಾಬು ಎ. ಗು | ಬಾಕಿ ಎ. ಗು | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 34 | 161 | ಉಮಾಶಂಕರ ಬಿನ್ ಡಿ.ಎಸ್.ಶಂಕರೇಗೌಡ | 3.01 | 0.01 | 3.00 | ಖುಷ್ಕಿ | – | 62 | 62 | 62 | 62 |
| 35 | 162 | ಮಂಜಯ್ಯ ಬಿನ್ ಹನುಮಂತಯ್ಯ | 3.30 | – | 3.30 | ಖುಷ್ಕಿ | – | 62 | 62 | 62 | 62 |
| 36 | 181 | ಶಿವನಂಜೇಗೌಡ ಬಿನ್ ನಂಜೇಗೌಡ | 2.00 | – | 2.00 | ಖುಷ್ಕಿ | – | 62 | 62 | 62 | 62 |
| 37 | 182 | ಹೇಮಾಕ್ಷಮ್ಮ ಕೋಂ ಶಿವೇಗೌಡ | 2.20 | – | 2.20 | ಖುಷ್ಕಿ | – | 62 | 62 | 62 | 62 |
| 38 | 183 | ವೆಂಕಟರಮಣಾಚಾರಿ ಬಿನ್ ವೆಂಕಟಾಚಾರಿ | 2.00 | – | 2.00 | ಖುಷ್ಕಿ | – | 62 | 62 | 62 | 62 |
| 39 | 184 | ಕೃಷ್ಣಾಚಾರಿ ಬಿನ್ ವೆಂಕಟಾಚಾರಿ | 1.30 | – | 1.30 | ಖುಷ್ಕಿ | – | 62 | 62 | 62 | 62 |
| 40 | 188 | ಪುಟ್ಟಸ್ವಾಮಿಗೌಡ ಬಿನ್ ಜವರೇಗೌಡ | 2.20 | – | 2.20 | ಖುಷ್ಕಿ | – | 62 | 62 | 62 | 62 |
| 41 | 189 | ಶಾಂತಮ್ಮ ಕೋಂ ಪದ್ಮನಾಭ | 3.00 | – | 3.00 | ಖುಷ್ಕಿ | – | 62 | 62 | 62 | 62 |
| ಒಟ್ಟು | | | **149–08** | **32–23** | **116–25** | | | | | | |

**ಘೋಷ್ವಾರೆ**

| ಕ್ರ.ಸಂ | ಗ್ರಾಮ | ವಿಸ್ತೀರ್ಣ | | |
|---|---|---|---|---|
| | | ಐನ್ | ಖರಾಬು | ಬಾಕಿ |
| 1 | ಕೆ.ಆಲದಹಳ್ಳಿ | 28–03 | 8–11 | 19–32 |
| 2 | ದೂತನೂರುಕಾವಲು | 149–08 | 32–23 | 116–25 |
| ಒಟ್ಟು | | **177–11** | **40–34** | **136–17** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಫೆಬ್ರವರಿ ೨, ೨೦೧೩ (ಮಾಘ ೧೩, ಶಕ ವರ್ಷ ೧೯೩೪) | ನಂ. ೧೪೨ |
| **Part – IV-A** | **Bangalore, Saturday, February 2, 2013 (Magha 13, Shaka Varsha 1934)** | **No. 142** |


## HOME SECRETARIAT

### NOTIFICATION

### HD 28 SHG 2012 Bangalore, Dated:29-01-2013

The draft of the following rules further to amend the Karnataka Home Guards and Civil Defence Services (Recruitment) Rules, 2010, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act for the information of persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion, which may be received by the State Government from any person with respect to the said draft before the expiry of the period specified above, will be considered by the State Government. Objections and suggestions may be addressed to the Principal Secretary to Government, Home Department, Karnataka Government Secretariat, Vidhana Soudha, Bangalore-560 001.

**DRAFT RULES**

**1. Title and commencement.-** (1) These rules may be called the Karnataka Home Guards and Civil Defence Services (Recruitment) (Amendment )Rules, 2012.

(2) They shall come into force on the date of their publication in the Official Gazette.

**2. Amendment of schedule.-** In the Karnataka Home Guards and Civil Defence Services (Recruitment) Rules, 2010, in the schedule,-

(a) in the entries relating to the category of the posts of "Instructor" at serial No.17 ,-

(i) in column (4),

(a) in the entries under the heading "Physical Endurance Test", for the words and figures, "The candidates are required to run 2 Kilometers in 10 minutes", the following shall be substituted namely:-

"The male candidates are required to run 2 kilometers in 10 minutes and woman candidates are required to run 500 meters in 2 minutes 30 seconds and ex-servicemen in 2 minutes."

(b) for the entries under the heading "Physical Efficiency Test", and before the heading "NOTE(1)",the following shall be substituted namely,-

**"For men**

| Items | Qualifying time/Distance |
|---|---|
| 100 Meters Run | 14.5 Seconds |
| High Jump | 1.25 Meters |
| Long Jump | 4.00 Meters |
| Shot put (7.26Kgs) | 5.80 Meters |
| 800 Meters Run | 2 minute 50 Seconds |

**For Women**

| Items | Qualifying time/Distance |
|---|---|
| 100 Meters Run | 18.5 Seconds |
| High Jump | 0.90 Meters |
| Long Jump | 2.50 Meters |
| Shot put (4 Kgs) | 3.75 Meters |
| 200 Meters Run | 40 Seconds |

**Ex-Service men**

| Items | Qualifying time/Distance |
|---|---|
| 100 Meters Run | 17 Seconds |
| High Jump | 1.00 Meters |
| Long Jump | 3.00 Meters |
| Shot put (4 Kgs) | 4.50 Meters |
| 200 Meters Run | 35 Seconds |

(ii) in column No.(5), under the sub heading "III Physical Standard" the following shall be inserted at the end, namely:-

"(A-1) For women

Height -157 cms

Weight -45 kg "

(b) in the entries relating to the category of the posts of "Assistant Instructor" at serial No.19,-

(i) in column No.(4),-

(a) in the entries under the heading "Physical Endurance Test", for the words and figures," "The candidates are required to run 2 Kilometers in 10 minutes", the following shall be substituted namely:-

" The male candidates are required to run 2 kilometers in 10 minutes and woman candidates are required to run 500 meters in 2 minutes 30 seconds and ex-servicemen in 2 minutes."

(b) for the entries under the heading "Physical Efficiency Test", and before the heading "NOTE (1)",the following shall be substituted namely,-

**"For men**

| Items | Qualifying time/Distance |
|---|---|
| 100 Meters Run | 14.5 Seconds |
| High Jump | 1.25 Meters |
| Long Jump | 4.00 Meters |
| Shot put (7.26Kgs) | 5.80 Meters |
| 800 Meters Run | 2 minute 50 Seconds |

**For Women**

| Items | Qualifying time/Distance |
|---|---|
| 100 Meters Run | 18.5 Seconds |
| High Jump | 0.90 Meters |
| Long Jump | 2.50 Meters |
| Shot put (4 Kgs) | 3.75 Meters |
| 200 Meters Run | 40 Seconds |

**For Ex-Service men**

| Items | Qualifying time/Distance |
|---|---|
| 100 Meters Run | 17 Seconds |
| High Jump | 1.00 Meters |
| Long Jump | 3.00 Meters |
| Shot put (4 Kgs) | 4.50 Meters |
| 200 Meters Run | 35 Seconds |

(ii) in column No (5), in item (A), under the Heading "Physical Standard" the following shall be inserted at the end, namely:-

"For women

Height -157 cms

Weight -45 kg "

By Order and in the name of the Governor of Karnataka

**H R PUTTEGOWDA**
Under secretary to Government
Home Department,
(Police Auxiliary Services)


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಸೋಮವಾರ, ಫೆಬ್ರವರಿ ೪, ೨೦೧೩ (ಮಾಘ ೧೫, ಶಕ ವರ್ಷ ೧೯೩೪) | ನಂ.೧೪೪ |
| **Part – IV-A** | **Bangalore, Monday, February 4, 2013 (Magha 15, Shaka Varsha 1934)** | **No. 144** |


## PUBLIC WORKS, PORTS & INLAND WATER TRANSPORT SECRETARIAT

### NOTIFICATION

### N0. PWD 28 DWS 2006, Bangalore, Date 04.02.2013

Whereas the draft of the Karnataka Public Works Engineering Department Services (Absorption of Work Charged Establishment Employees) (Special)(Amedndment) Rules, 2012, was published as required by clause (a) of sub section(2) of section 3 of the Karnataka State Civil Services Act, 1978(Karnataka Act 14 of 1990) in Notification No.PWD 28 DWS 2006 dated 21.11.2012 in Part IV-A of the Karnataka Extraordinary Gazette dated 21.11.2012 inviting objections and suggestions from all persons likely to be affected thereby within fifteen days from the date of its publication in the Official Gazette.

And Whereas the said Gazette made available to the public on 21.11.2012,

And Whereas, no objections and suggestions received by the State Government on the said draft;

Now, therefore in exercise of the powers conferred by sub-section (1) of section 3 read with section 8 of the Karnataka State Civil Services Act, 1978(Karnataka Act 14 of 1990), the Government of Karnataka hereby makes the following rules, namely:-

**RULES**

**1. Title and commencement**:- (1) These rules may be called the Karnataka Public Works Engineering Department Services (Absorption of Work Charged Establishment Employees) (Special) (Amendment) Rules, 2012.

(2) It shall be deemed to have come into force w.e.f. 12th day of April 1999.

**2. Amendment of the schedule**:- In the schedule to the Karnataka Public Works Engineering Department Services (Absorption of Work Charged Establishment Employees) (Special) Rules, 1997.

(a) under the heading "Z.P.E. DIVISION, DAVANAGERE", after the entries relating to Gangadara Driver at Serial Number 136, the following shall be inserted, namely:-

| | | | | |
|---|---|---|---|---|
| **136A** | **Vazeer Ahmed** | **Driver** | **Driver** | **Rs.2775-4950** |

(b) under the heading "Z.P.E.D, DAVANAGERE", the entries relating to "Nazeer Ahmed, Watchman Rs.2500-3850" at serial number 250, shall be omitted.

By order & in the name of the Governor of Karnataka

**S.S. VIRAKTAMATH**
Under Secretary to Government,
Public Works, Ports & Inland water
Transport Department (Services-C)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಸೋಮವಾರ, ಫೆಬ್ರವರಿ ೪, ೨೦೧೩ (ಮಾಘ ೧೫, ಶಕ ವರ್ಷ ೧೯೩೪)<br>Bangalore, Monday, February 4, 2013 (Magha 15, Shaka Varsha 1934) | ನಂ. ೧೪೫<br>No. 145 |
|---|---|---|


## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 266 ಸೇಸಕಿ 12, ಬೆಂಗಳೂರು ದಿನಾಂಕ: 02ನೇ ಫೆಬ್ರವರಿ, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಶ್ರೀ ವೆಂಕಟೇಶಮೂರ್ತಿ, ಸಹಾಯಕ ಇಂಜಿನಿಯರ್, ಇವರು ದಿನಾಂಕ 21–06–1984 ರಲ್ಲಿ ದಿನಗೂಲಿ ಆಧಾರದ ಮೇಲೆ ಕಿರಿಯ ಇಂಜಿನಿಯರ್ ಹುದ್ದೆಯ ಕರ್ತವ್ಯಕ್ಕೆ ಸೇರಿದ್ದು ದಿನಾಂಕ 21–6–1994ರಿಂದ ಅನ್ವಯವಾಗುವಂತೆ ಸೇವಾ ಸಕ್ರಮಾತಿಗೊಂಡು ದಿನಾಂಕ 13–12–1996ರಲ್ಲಿ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿ ದಿನಾಂಕ 31–1–97 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಕಲ್ಪಿಸಿರುವ ಅವಕಾಶದಂತೆ ಸದರಿಯವರು ಈ ಹಿಂದೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ 21–6–94 ರಿಂದ 31–1–97ರವರೆಗೆ ಸಲ್ಲಿಸಿದ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತೆಯನ್ನು ದಿನಾಂಕ 20–3–96ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಸೇವಾ ಹಿರಿತನದ ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀ ಬೆಟ್ಟದೂರ್ ಆರ್.ವೈ. (ಕ್ರಮ ಸಂಖ್ಯೆ 3510) ಇವರ ಮೇಲೆ ಕ್ರಮ ಸಂಖ್ಯೆ 3509–A ರಲ್ಲಿ ನಿಗದಿಪಡಿಸಲು ಉದ್ದೇಶಿಸಿ ಸೇರ್ಪಡೆ ಮಾಡಿ ತಿದ್ದುಪಡಿಯ ಕರಡು ಅಧಿಸೂಚನೆಯನ್ನು ಸಂಖ್ಯೆ ಲೋಇ:266:ಸೇಸಕಿ:12 ದಿನಾಂಕ 26–12–2012ರಲ್ಲಿ ಹೊರಡಿಸಿ ಬಾಧಿತರಾಗಬಹುದಾದ ಅಧಿಕಾರಿ/ನೌಕರರುಗಳಿಂದ ಆಕ್ಷೇಪಣೆ ಸಲಹೆ/ಮನವಿಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸಲು 15 ದಿವಸಗಳ ಅವಕಾಶ ಕಲ್ಪಿಸಲಾಗಿತ್ತು.

ಸದರಿ ಅಧಿಸೂಚನೆಯು ದಿನಾಂಕ 26–12–2012ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಗೊಂಡಿದ್ದು ಈ ಸಂಬಂಧ ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆ/ಸಲಹೆ/ಮನವಿ ಗಳನ್ನು ಸ್ವೀಕರಿಸಿರುವುದಿಲ್ಲ.

ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ವೆಂಕಟೇಶ್‌ಮೂರ್ತಿ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3509–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಿ ಅಂತಿಮಗೊಳಿಸಿ ಹೊರಡಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3509-A | - | Venkatesh Murthy | - | 05-06-62 | 21-06-1994 | 31-01-1997<br>20-03-1996<br>* | DWR |

* He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಸದರಿ ಸೇರ್ಪಡೆಯು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯ ಪ್ರಕರಣಗಳು ಬಾಕಿ ಇದ್ದಲ್ಲಿ ನ್ಯಾಯಾಲಯವು ನೀಡುವ ತೀರ್ಪಿನ ಮೇರೆಗೆ ಪುನರ್ ಪರಿಷ್ಕರಣೆಗೆ ಒಳಪಟಿರುತ್ತದೆ ಎಂಬ ಷರತ್ತು ಈ ಪ್ರಕರಣಕ್ಕೆ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ರಾಜ್ಯ ಪತ್ರಿಕೆ



| ಭಾಗ – III | ಬೆಂಗಳೂರು, ಸೋಮವಾರ, ಫೆಬ್ರವರಿ ೪, ೨೦೧೩ (ಮಾಘ ೧೫, ಶಕ ವರ್ಷ ೧೯೩೪) | ನಂ. ೧೪೬ |
|---|---|---|
| Part – III | Bangalore, Monday, February 4, 2013 (Magha 15, Shaka Varsha 1934) | No. 146 |



## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 249 ಸೇಸಕಿ 12, ಬೆಂಗಳೂರು ದಿನಾಂಕ: 02ನೇ ಫೆಬ್ರವರಿ, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ ದಿನಾಂಕ: 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಶ್ರೀ ಹೆಚ್.ಉಮಾಪತಿ, ಸಹಾಯಕ ಇಂಜಿನಿಯರ್, ಇವರು ದಿನಾಂಕ: 24–06–1983 ರಲ್ಲಿ ದಿನಗೂಲಿ ಆಧಾರದ ಮೇಲೆ ಕಿರಿಯ ಇಂಜಿನಿಯರ್ ಹುದ್ದೆಯ ಕರ್ತವ್ಯಕ್ಕೆ ಸೇರಿದ್ದು ದಿನಾಂಕ: 24–6–1993ರಿಂದ ಅನ್ವಯವಾಗುವಂತೆ ಸೇವಾ ಸಕ್ರಮಾತಿಗೊಂಡು, ದಿನಾಂಕ: 15–3–1995 ರಿಂದ ಮಂಜೂರಾದ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸೇವಾ ವರದಿ ಮಾಡಿಕೊಂಡು, ತದನಂತರ ದಿನಾಂಕ: 14–11–1996ರಲ್ಲಿ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿ ದಿನಾಂಕ: 27–1–97 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಸುತ್ತಿರುತ್ತಾರೆ. ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಕಲ್ಪಿಸಿರುವ ಅವಕಾಶದಂತೆ ಸದರಿಯವರು ಈ ಹಿಂದೆ ಮಂಜೂರಾದ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ: 15–3–95 ರಿಂದ 27–1–97ರವರೆಗೆ ಸಲ್ಲಿಸಿದ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತೆಯನ್ನು ದಿನಾಂಕ: 14–6–96ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಸೇವಾ ಹಿರಿತನದ ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀ ಲೋಕೇಶ್ ಎಸ್.ವಿ. (ಕ್ರಮ ಸಂಖ್ಯೆ 3525)ಇವರ ಮೇಲೆ ಕ್ರಮ ಸಂಖ್ಯೆ 3524–A ರಲ್ಲಿ ನಿಗದಿಪಡಿಸಲು ಉದ್ದೇಶಿಸಿ ಸೇರ್ಪಡೆ ಮಾಡಿ ತಿದ್ದುಪಡಿಯ ಕರಡು ಅಧಿಸೂಚನೆಯನ್ನು ಸಂಖ್ಯೆ ಲೋಇ:249:ಸೇಸಕಿ:12 ದಿನಾಂಕ: 26–12–2012ರಲ್ಲಿ ಹೊರಡಿಸಿ ಬಾದಿತರಾಗಬಹುದಾದ ಅಧಿಕಾರಿ/ನೌಕರರುಗಳಿಂದ ಆಕ್ಷೇಪಣೆ ಸಲಹೆ/ಮನವಿಗಳನ್ನು ಸರ್ಕಾರದ ಪ್ರದಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸಲು 15 ದಿವಸಗಳ ಅವಕಾಶ ಕಲ್ಪಿಸಲಾಗಿತ್ತು.

ಸದರಿ ಅಧಿಸೂಚನೆಯು ದಿನಾಂಕ: 26–12–2012ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿದ್ದು ಈ ಸಂಬಂಧ ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆ/ಸಲಹೆ/ಮನವಿಗಳನ್ನು ಸ್ವೀಕರಿಸಿರುವುದಿಲ್ಲ.

ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಹೆಚ್.ಉಮಾಪತಿ ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3524–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಿ ಅಂತಿಮಗೊಳಿಸಿ ಹೊರಡಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3524-A | - | H.Umapathi | - | 01-07-63 | 15-03-95 | 27-01-97<br>14-06-1996 * | DWR |

* He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಸದರಿ ಸೇರ್ಪಡೆಯು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯ ಪ್ರಕರಣಗಳು ಬಾಕಿ ಇದ್ದಲ್ಲಿ ನ್ಯಾಯಾಲಯವು ನೀಡುವ ತೀರ್ಪಿನ ಮೇರಗೆ ಪುನರ್ ಪರಿಷ್ಕರಣೆಗೆ ಒಳಪಟಿರುತ್ತದೆ ಎಂಬ ಷರತ್ತು ಈ ಪ್ರಕರಣಕ್ಕೆ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಫೆಬ್ರವರಿ ೫, ೨೦೧೩ (ಮಾಘ ೧೬, ಶಕ ವರ್ಷ ೧೯೩೪) | ನಂ. ೧೪೯ |
|---|---|---|
| Part – IV-A | Bangalore, Tuesday, February 5, 2013 (Magha 16, Shaka Varsha 1934) | No. 149 |


## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಪಸಂಮೀ 68 ಪಪಾಯೋ 2011, ಬೆಂಗಳೂರು, ದಿನಾಂಕ: 05.02.2013.**

ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣಾ (ಗೋಸೇವಾ ಆಯೋಗದ ರಚನೆ) ನಿಯಮಗಳ 2012ರ ಕರಡನ್ನು ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣಾ ಅಧಿನಿಯಮ, 1964 (ಕರ್ನಾಟಕ ಅಧಿನಿಯಮ 1964ರ 35)ರ 19ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಅಧಿಸೂಚನೆ ಸಂಖ್ಯೆ: ಎಹೆಚ್‌ಎಫ್ 68 ಎಹೆಚ್‌ಪಿ 2011, ದಿನಾಂಕ: 16ನೇ ಆಗಸ್ಟ್, 2012ನ್ನು ಕರ್ನಾಟಕ ರಾಜ್ಯಪತ್ರ ವಿಶೇಷ ಸಂಚಿಕೆ ಭಾಗ–IVಎ ಪ್ರಕರಣ 2ಸಿ(i), ದಿನಾಂಕ: 21ನೇ ಆಗಸ್ಟ್, 2012 ರಲ್ಲಿ ಪ್ರಕಟಿಸಿ, ಇದರಿಂದ ಭಾದಿತರಾಗಬಹುದಾದ ಎಲ್ಲ ವ್ಯಕ್ತಿಗಳಿಂದ ಇದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಮೂವತ್ತು ದಿನಗಳ ಒಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿರುವುದರಿಂದ;

ಸದರಿ ರಾಜ್ಯಪತ್ರವು 21ನೇ ಆಗಸ್ಟ್, 2012ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಈ ಸಂಬಂಧದಲ್ಲಿ ಸ್ವೀಕರಿಸಲಾದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆಯ ಅಧಿನಿಯಮ 1964 (ಕರ್ನಾಟಕ ಅಧಿನಿಯಮ 1964ರ 35)ರ 18ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ;

## ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆ (ಗೋಸೇವಾ ಆಯೋಗದ ರಚನೆ) ನಿಯಮಗಳು 2012 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು:–** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು:–

(ಎ) **"ಅಧಿನಿಯಮ"** ಎಂದರೆ ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆ ಅಧಿನಿಯಮ 1964 (ಕರ್ನಾಟಕ ಅಧಿನಿಯಮ 1964ರ 35) ಎಂದು ಕರೆಯತಕ್ಕದ್ದು.

(ಬಿ) **"ಆಯೋಗ"** ಎಂದರೆ ಈ ನಿಯಮಗಳ ಮೇರೆಗೆ ರಚಿಸಲಾದ ಕರ್ನಾಟಕ ರಾಜ್ಯ ಗೋಸೇವಾ ಆಯೋಗ.

(ಸಿ) **"ಅಧ್ಯಕ್ಷ"** ಎಂದರೆ ಆಯೋಗದ ಅಧ್ಯಕ್ಷರು.

(ಡಿ) **"ನಮೂನೆ"** ಎಂದರೆ ಈ ನಿಯಮಗಳಿಗೆ ಲಗತ್ತಿಸಲಾದ ನಮೂನೆ.

(ಇ) **"ಸಂಸ್ಥೆ"** ಎಂದರೆ ಜಾನುವಾರು ಕ್ಷೇಮಾಭಿವೃದ್ಧಿಯಲ್ಲಿ ತೊಡಗಿರುವ ಮತ್ತು ಜಾನುವಾರು ರಕ್ಷಣೆ, ಸಂವರ್ಧನೆ, ಸಾಕಾಣಿಕೆ ಮತ್ತು ನಿರ್ವಹಣೆಯ ಉದ್ದೇಶಕ್ಕಾಗಿ ಅಥವಾ ದುರ್ಬಲ, ವಯಸ್ಸಾದ ಮತ್ತು ರೋಗವಿರುವ ಜಾನುವಾರಿನ ಸ್ವೀಕರಣೆ, ರಕ್ಷಣೆ, ಆರೈಕೆ, ನಿರ್ವಹಣೆ ಮತ್ತು ಚಿಕಿತ್ಸೆಗಾಗಿ ಸ್ಥಾಪಿಸಿದ ಯಾವುದೇ ಧರ್ಮಾರ್ಥ ಸಂಸ್ಥೆ ಮತ್ತು ಗೋಸದನ, ಗೋಶಾಲ, ಪಿಂಜ್ರಾಪೋಲೆ, ಗೋರಕ್ಷಕ ಸಂಸ್ಥೆ ಮತ್ತು ಇವುಗಳ ಒಕ್ಕೂಟ ಅಥವಾ ಪ್ರಸ್ತುತ ಜಾರಿಯಲ್ಲಿರುವ ಯಾವುದೇ ಅಧಿನಿಯಮಿತಿ ಅಥವಾ ಇತರೆ ಮೇರೆಗೆ ನೋಂದಾಯಿತ ಸಂಘವನ್ನು ಒಳಗೊಳ್ಳುತ್ತದೆ.

(ಎಫ್) **"ಸದಸ್ಯ"** ಎಂದರೆ ಆಯೋಗದ ಒಬ್ಬ ಸದಸ್ಯ ಮತ್ತು ಅಧ್ಯಕ್ಷರನ್ನು ಒಳಗೊಳ್ಳುತ್ತದೆ.

**3. ಆಯೋಗದ ರಚನೆ:–** (1) ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ತನಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮತ್ತು ಇದಕ್ಕೆ ವಹಿಸಲಾದ ಪ್ರಕಾರ್ಯಗಳ ನಿರ್ವಹಣೆಗಾಗಿ ಕರ್ನಾಟಕ ರಾಜ್ಯ ಗೋಸೇವಾ ಆಯೋಗ ಎಂದು ಕರೆಯಲಾಗುವ ನಿಕಾಯವೊಂದನ್ನು ರಚಿಸಿದೆ.

(2) ಆಯೋಗವು ಅಧ್ಯಕ್ಷರು ಮತ್ತು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಿರುತ್ತದೆ; ಎಂದರೆ :–

(i) ಪದನಿಮಿತ್ತ ಸದಸ್ಯರು.–

(ಎ) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಅಥವಾ ಇವರಿಂದ ನಾಮ ನಿರ್ದೇಶಿತಗೊಂಡ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗೆ ಕಡಿಮೆ ಇಲ್ಲದ ಅಧಿಕಾರಿ.

(ಬಿ) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗೃಹ ಇಲಾಖೆ ಅಥವಾ ಇವರಿಂದ ನಾಮ ನಿರ್ದೇಶಿತಗೊಂಡ ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆ ಇಲ್ಲದ ಅಧಿಕಾರಿ.

(ಸಿ) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಅಥವಾ ಇವರಿಂದ ನಾಮನಿರ್ದೇಶನಗೊಂಡ ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆ ಇಲ್ಲದ ಅಧಿಕಾರಿ.

(ಡಿ) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಅಥವಾ ಇವರಿಂದ ನಾಮ ನಿರ್ದೇಶಿತಗೊಂಡ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗೆ ಕಡಿಮೆ ಇಲ್ಲದ ಅಧಿಕಾರಿ.

(ಇ) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಅಥವಾ ಇವರಿಂದ ನಾಮ ನಿರ್ದೇಶಿತಗೊಂಡ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ.

(ಎಫ್) ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು;

(ಜಿ) ಆಯುಕ್ತರು, ಕೃಷಿ ಇಲಾಖೆ;

(ಹೆಚ್) ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ;

(ಐ) ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳ ಇಲಾಖೆ – ಸದಸ್ಯ ಕಾರ್ಯದರ್ಶಿ

(ii) ರಾಜ್ಯ ಸರ್ಕಾರವು ಜಾನುವಾರುಗಳ ಕ್ಷೇಮಾಭಿವೃದ್ಧಿಯಲ್ಲಿ ಆಸಕ್ತಿ ಹೊಂದಿದ ಹನ್ನೊಂದು (11) ಸರ್ಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡತಕ್ಕದ್ದು ಮತ್ತು ಇವರುಗಳ ಪೈಕಿ ಒಬ್ಬರನ್ನು ಅಧ್ಯಕ್ಷರನ್ನಾಗಿ ರಾಜ್ಯ ಸರ್ಕಾರವು ನೇಮಕ ಮಾಡತಕ್ಕದ್ದು.

(3) (2)ನೇ ಉಪ ಪ್ರಕರಣದ ಮೇರೆಗೆ ಸರ್ಕಾರೇತರ ಸದಸ್ಯರ ಪ್ರತಿಯೊಂದು ನೇಮಕಾತಿಯು ಅಧಿಕೃತ ರಾಜ್ಯಪತ್ರದಲ್ಲಿನ ಅಧಿಸೂಚನೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**4. ಅರ್ಹತೆಗಳು :–** ಯಾರೇ ವ್ಯಕ್ತಿಯು–

(ಎ) ಭಾರತದ ನಾಗರಿಕನಾಗಿರದ ಹೊರತು;

(ಬಿ) ಇಪ್ಪತ್ತೊಂದು ವರ್ಷಗಳ ವಯಸ್ಸನ್ನು ತಲುಪಿರದ ಹೊರತು;

(ಸಿ) ಅವನು ಅಸ್ವಸ್ಥನಾಗಿರುವನೆಂದು ಸಕ್ಷಮ ನ್ಯಾಯಾಲಯವು ನಿರ್ಣಯಿಸಿದ್ದರೆ;

(ಡಿ) ಅವನು, ನೈತಿಕ ಅಧಃಪತನವನ್ನೊಳಗೊಂಡಿರುವ ಅಪರಾಧಕ್ಕಾಗಿ ಕಾರಾವಾಸಕ್ಕೆ ಯಾವುದೇ ನ್ಯಾಯಾಲಯದಿಂದ ಶಿಕ್ಷೆಗೆ ಒಳಗಾಗಿದ್ದರೆ;

(ಇ) ಅವನನ್ನು ದುರ್ನಡತೆಗಾಗಿ ರಾಜ್ಯ ಸರ್ಕಾರದ ಸೇವೆಯಿಂದ ವಜಾ ಮಾಡಿದ್ದರೆ ಮತ್ತು ಸಾರ್ವಜನಿಕ ಸೇವೆಯ ಉದ್ಯೋಗಕ್ಕೆ ಅನರ್ಹನೆಂದು ಘೋಷಿಸಿದ್ದರೆ; ಮತ್ತು

(ಎಫ್) ಅವನು ದಿವಾಳಿಯಾಗಿದ್ದಾನೆ ಎಂದು ಘೋಷಿತನಾಗಿದ್ದರೆ;

– ಸರ್ಕಾರೇತರ ಸದಸ್ಯನಾಗಿ ನೇಮಕಗೊಳ್ಳಲು ಅರ್ಹನಾಗಿರತಕ್ಕದ್ದಲ್ಲ.

**5. ಆಯೋಗದ ಸದಸ್ಯರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು:–** (1) ಆಯೋಗದ ಪ್ರತಿಯೊಬ್ಬ ಸದಸ್ಯನು 3ನೇ ಉಪನಿಯಮದ ಮೇರೆಗೆ ಅಧಿಕೃತ ರಾಜ್ಯಪತ್ರದಲ್ಲಿ ನೇಮಕಾತಿಯನ್ನು ಅಧಿಸೂಚಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಯವರೆಗೆ ಅಧಿಕಾರವನ್ನು ಹೊಂದಿರತಕ್ಕದ್ದು.

(2) ಕರ್ನಾಟಕ ಸಿವಿಲ್ ಸೇವಾ ನಿಯಮಗಳ ಅನುಬಂಧ–ಎ ಅನುಸಾರವಾಗಿ ಸರ್ಕಾರೇತರ ಸದಸ್ಯನಿಗೆ ಅನ್ವಯವಾಗಬಹುದಾದಂಥ ಪ್ರಯಾಣಭತ್ಯೆಗಳು ಮತ್ತು ಇತರ ಭತ್ಯೆಗಳನ್ನು ಸರ್ಕಾರೇತರ ಸದಸ್ಯರಿಗೆ ಸಂದಾಯ ಮಾಡತಕ್ಕದ್ದು.

(3) ಸರ್ಕಾರೇತರ ಸದಸ್ಯನು ರಾಜ್ಯ ಸರ್ಕಾರಕ್ಕೆ ತನ್ನ ಕೈಬರಹದ ಲಿಖಿತದಲ್ಲಿ ಬರೆದುಕೊಂಡು ತನ್ನ ಹುದ್ದೆಗೆ ರಾಜೀನಾಮೆ ನೀಡಬಹುದು.

(4) ರಾಜ್ಯ ಸರ್ಕಾರವು, ಅವನು;–

(ಎ) ಅವಿಮುಕ್ತ ದಿವಾಳಿಯಾಗಿದ್ದರೆ;

(ಬಿ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನ ಒಳಗೊಂಡು ಅಪರಾಧಕ್ಕಾಗಿ ಅಪರಾಧಿಯೆಂದು ನಿರ್ಣೀತನಾಗಿದ್ದರೆ ಮತ್ತು ಕಾರಾವಾಸ ಶಿಕ್ಷೆಗೆ ಗುರಿಯಾಗಿದ್ದರೆ;

(ಸಿ) ಅಸ್ವಸ್ಥ ಮನಸ್ಸಿನವನಾಗಿದ್ದರೆ ಮತ್ತು ಸಕ್ಷಮ ನ್ಯಾಯಾಲಯವು ಹಾಗೆಂದು ಘೋಷಿಸಿದ್ದರೆ;

(ಡಿ) ಕರ್ತವ್ಯ ನಿರ್ವಹಿಸಲು ನಿರಾಕರಿಸಿದರೆ ಅಥವಾ ಅಸಮರ್ಥನಾಗಿದ್ದರೆ;

(ಇ) ಆಯೋಗದಿಂದ ಗೈರು ಹಾಜರಿಗಾಗಿ ಅನುಮತಿ ಪಡೆಯದೆ, ಆಯೋಗದ ಮೂರು ಸತತ ಸಭೆಗಳಿಗೆ ಗೈರುಹಾಜರಾಗಿದ್ದರೆ; ಅಥವಾ

(ಎಫ್) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ಅಧ್ಯಕ್ಷ ಅಥವಾ ಸದಸ್ಯನು ಸ್ಥಾನವನ್ನು ದುರುಪಯೋಗ ಪಡಿಸಿಕೊಂಡಿದ್ದು ಅದನ್ನು ಪಶು ಸಂಪತ್ತಿನ ಹಿತಾಸಕ್ತಿಗಳಿಗೆ ಅಥವಾ ಸಾರ್ವಜನಿಕ ಹಿತಾಸಕ್ತಿಗೆ ಅಪಾಯ ಉಂಟು ಮಾಡುವಂತಿದ್ದರೆ, ಅಧಿಕಾರದಿಂದ ಸರ್ಕಾರೇತರ ಸದಸ್ಯನನ್ನು ತೆಗೆದುಹಾಕತಕ್ಕದ್ದು.

ಪರಂತು, ಯಾರೇ ವ್ಯಕ್ತಿಯನ್ನು ಈ ಉಪ–ಪ್ರಕರಣದ ಮೇರೆಗೆ ಈ ವಿಷಯದಲ್ಲಿ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ಹೊರತು ತೆಗೆದುಹಾಕತಕ್ಕದ್ದಲ್ಲ.

**6. ಸಾಂದರ್ಭಿಕ ಖಾಲಿ ಸ್ಥಾನ:–** ಸರ್ಕಾರೇತರ ಸದಸ್ಯನ ಮರಣ, ರಾಜೀನಾಮೆ ಅಥವಾ ಅನರ್ಹತೆ ಅಥವಾ ತನ್ನ ಅಧಿಕಾರದ ಅವಧಿಯು ಮುಕ್ತಾಯಕ್ಕೆ ಮೊದಲೇ ಕಾರ್ಯ ನಿರ್ವಹಿಸಲು ಅಸಮರ್ಥಗೊಂಡ ಸಂದರ್ಭದಲ್ಲಿ ಉಂಟಾದ ಅಂಥ ಖಾಲಿ ಸ್ಥಾನವನ್ನು ಅಂಥ ಕಾರ್ಯಾಲಯದಲ್ಲಿ ಉಂಟಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಅಂಥ ಖಾಲಿ ಸ್ಥಾನವನ್ನು ಸಾಧ್ಯವಾದಷ್ಟು ಬೇಗನೆ ಅದಕ್ಕೆ ಒಬ್ಬ ವ್ಯಕ್ತಿಯನ್ನು ಸದಸ್ಯ ಎಂದು ನೇಮಕ ಮಾಡತಕ್ಕದ್ದು. ಇವನು ತನ್ನ ಪೂರ್ವಾಧಿಕಾರಿ ಸದಸ್ಯನ ಅವಧಿ ಮುಕ್ತಾಯವಾಗುವವರೆಗೆ ಅಧಿಕಾರ ಹೊಂದಿರತಕ್ಕದ್ದು.

**7. ಆಯೋಗದ ಕೇಂದ್ರ ಕಚೇರಿ ಹಾಗೂ ಸಭೆಗಳು:–** (1) ಆಯೋಗದ ಕೇಂದ್ರ ಕಚೇರಿಯು ಬೆಂಗಳೂರಿನಲ್ಲಿ ಇರತಕ್ಕದ್ದು.

(2) ಆಯೋಗವು, ವರ್ಷದಲ್ಲಿ ಕನಿಷ್ಠ ಪಕ್ಷ ಎರಡು ಬಾರಿ ಸಭೆ ಸೇರತಕ್ಕದ್ದು ಹಾಗೂ ನಡಾವಳಿ ಪುಸ್ತಕದಲ್ಲಿ ತನ್ನ ವ್ಯವಹರಣೆಗಳ ದಾಖಲೆಯನ್ನು ಇಡತಕ್ಕದ್ದು. ಅಧ್ಯಕ್ಷರು ಆಯೋಗದ ಸಭೆಗಳನ್ನು ನಡೆಸತಕ್ಕದ್ದು ಮತ್ತು ಅಂಥ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅಧ್ಯಕ್ಷರ ಗೈರು ಹಾಜರಿಯಲ್ಲಿ ಹಾಜರಿರುವ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಅಧ್ಯಕ್ಷತೆ ವಹಿಸಲು ಅಧ್ಯಕ್ಷ ಎಂದು ಆಯ್ಕೆ ಮಾಡತಕ್ಕದ್ದು.

**8. ಖಾಲಿ ಸ್ಥಾನವು ಆಯೋಗದ ವ್ಯವಹರಣೆಗಳನ್ನು ಅಸಿಂಧುಗೊಳಿಸದಿರುವುದು:–** ಆಯೋಗದ ಯಾವುದೇ ಕ್ರಮ ಅಥವಾ ವ್ಯವಹರಣೆಯು ಯಾವುದೇ ಖಾಲಿ ಸ್ಥಾನ ಉಂಟಾಗಿದೆ ಎಂಬ ಕಾರಣದಿಂದ ಅಥವಾ ಆಯೋಗದ ರಚನೆಯಲ್ಲಿ ಯಾವುದೇ ನ್ಯೂನತೆ ಇದೆ ಎಂಬ ಕಾರಣದಿಂದ ಅಸಿಂಧುವಾಗಿದೆ ಎಂದು ಭಾವಿಸತಕ್ಕದ್ದಲ್ಲ.

**9. ಅಧಿಕಾರಿಗಳು ಹಾಗೂ ಇತರ ಉದ್ಯೋಗಿಗಳ ನೇಮಕಾತಿ:–** ರಾಜ್ಯ ಸರ್ಕಾರವು, ಈ ಅಧಿನಿಯಮದ ಮೇರೆಗೆ ಆಯೋಗವು ತನ್ನ ಪ್ರಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸಲು ಸಾಧ್ಯವಾಗುವ ಉದ್ದೇಶಕ್ಕಾಗಿ ಅವಶ್ಯವೆಂದು ಪರಿಗಣಿಸಬಹುದಾದಂಥ ಸಂಖ್ಯೆಯ ಅಧಿಕಾರಿಗಳು ಹಾಗೂ ಇತರ ಉದ್ಯೋಗಿಗಳನ್ನು ಒದಗಿಸಬಹುದು.

**10. ಸಂಸ್ಥೆಗಳ ನೋಂದಣಿ ಹಾಗೂ ಇವುಗಳ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ:–** (1) ಈ ಆಯೋಗವನ್ನು ರಚಿಸಿದ ನಂತರ ಪ್ರತಿಯೊಂದು ಸಂಸ್ಥೆಯು, ಮೂರು ತಿಂಗಳುಗಳ ಒಳಗಾಗಿ ಈ ಬಗ್ಗೆ ನಿಯಮಗಳ ಮೇರೆಗೆ ನೋಂದಣಿಗಾಗಿ ನಮೂನೆ–ಎ ರಲ್ಲಿ ಅರ್ಜಿಯನ್ನು ವಿವರಗಳ ಸಹಿತ ನೋಂದಣಿ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(2) ಅರ್ಜಿಯು, ಆಯೋಗವು ಸೂಚಿಸಬಹುದಾದಂಥ ಶುಲ್ಕವನ್ನು ಒಳಗೊಂಡಿರತಕ್ಕದ್ದು;

(3) ಆಯೋಗವು, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ ನಮೂನೆ–ಬಿ ಯಲ್ಲಿ ನೋಂದಣಿ ಪ್ರಮಾಣಪತ್ರವನ್ನು ನೀಡತಕ್ಕದ್ದು.

(4) ಆಯೋಗವು ತನ್ನಲ್ಲಿ ನಮೂನೆ 'ಸಿ' ಯಲ್ಲಿ ನೋಂದಾಯಿತ ಸಂಸ್ಥೆಯ ನೋಂದಣಿ ರಿಜಿಸ್ಟರ್ ಅನ್ನು ನಿರ್ವಹಿಸತಕ್ಕದ್ದು.

(5) ರಿಜಿಸ್ಟರಿನಲ್ಲಿ ದಾಖಲಾದ ಯಾವುದೇ ಸಂಸ್ಥೆಗೆ ಸಂಬಂಧಿಸಿದ ವಿವರಗಳಲ್ಲಿ ಯಾವುದೇ ಬದಲಾವಣೆ ಉಂಟಾದಾಗ ಸಂಸ್ಥೆಯ ಪರವಾಗಿ ಕಾರ್ಯ ನಿರ್ವಹಿಸಲು ನಿಯುಕ್ತಗೊಂಡ ವ್ಯಕ್ತಿಯು ಆಯೋಗಕ್ಕೆ ಬದಲಾವಣೆಯ ಬಗ್ಗೆ ವರದಿಯನ್ನು ಮಾಡತಕ್ಕದ್ದು. ಆಯೋಗವು ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯ ತರುವಾಯ ರಿಜಿಸ್ಟರಿನಲ್ಲಿ ಅಗತ್ಯ ಬದಲಾವಣೆಗಳನ್ನು ಮಾಡತಕ್ಕದ್ದು.

(6) ಈ ಆಯೋಗದಲ್ಲಿ ನೋಂದಣಿ ಮಾಡಲಾದಂತಹ ಪ್ರತಿಯೊಂದು ಸಂಸ್ಥೆಯ ಲೆಕ್ಕಪತ್ರಗಳನ್ನು ಪ್ರತಿ ವರ್ಷದ 31ನೇ ಮಾರ್ಚ್ ದಿನದಂದು ಸಮತೋಲನ ಮಾಡತಕ್ಕದ್ದು ಹಾಗೂ ತನ್ನ ಲೆಕ್ಕಪತ್ರಗಳನ್ನು ಪ್ರತಿಯೊಂದು ಆರ್ಥಿಕ ವರ್ಷದ ಮುಕ್ತಾಯದ ನಂತರ 2 ತಿಂಗಳುಗಳ ಒಳಗಾಗಿ ಒಬ್ಬ ಚಾರ್ಟರ್ಡ್ ಅಕೌಂಟೆಂಟರಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು ಹಾಗೂ ಇದನ್ನು ಆಯೋಗದಿಂದ ಸ್ವೀಕರಿಸಿದ ನಮೂನೆಗಳಲ್ಲಿ ಬಳಕೆ ಪ್ರಮಾಣ ಪತ್ರದೊಂದಿಗೆ ಪ್ರತಿ ವರ್ಷವೂ ಆಯೋಗಕ್ಕೆ ಸಲ್ಲಿಸತಕ್ಕದ್ದು.

**11. ಆಯೋಗದ ಪ್ರಕಾರ್ಯಗಳು:–** ಆಯೋಗವು, ರಾಜ್ಯದಲ್ಲಿ ಪಶುಸಂಪತ್ತಿನ ಅಭಿವೃದ್ಧಿಗಾಗಿ ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(ಎ) ತತ್ಕಾಲದಲ್ಲಿ ಜಾರಿಯಲ್ಲಿರುವ ರಾಜ್ಯ ಅಧಿನಿಯಮಗಳು, ಕೇಂದ್ರ ಅಧಿನಿಯಮಗಳು ಹಾಗೂ ಪ್ರಸಕ್ತ ಜಾರಿಯಲ್ಲಿರುವ ಕಾನೂನುಗಳ ಮೇರೆಗೆ ಜಾನುವಾರುಗಳಿಗೆ ಉಪಬಂಧಿಸಿದ ಸಂರಕ್ಷಣೆಯನ್ನು ಖಚಿತಪಡಿಸುವುದು;

(ಬಿ) ಹಾಗೂ ಕಾನೂನುಗಳ ಯುಕ್ತ ಹಾಗೂ ಸಕಾಲಿಕ ಅನುಷ್ಠಾನವನ್ನು ಖಚಿತಪಡಿಸುವುದು ಹಾಗೂ ಇವುಗಳನ್ನು ಪರಿಣಾಮಕಾರಿಗೊಳಿಸಲು ಅಂಥ ಅನುಷ್ಠಾನಕ್ಕೆ ಜವಾಬ್ದಾರಿಯಾಗಿರುವಂಥ ರಾಜ್ಯ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸ್ವಾಧೀನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಕಾಯ ಅಥವಾ ಪ್ರಾಧಿಕಾರದ ಸಂಬಂಧಪಟ್ಟ ಇಲಾಖೆಗಳಿಗೆ ಪರಿಹಾರಕ ಕ್ರಮಗಳನ್ನು ಪ್ರಸ್ತಾವಿಸುವುದು;

(ಸಿ) ಪ್ರಸ್ತುತ ಹಾಗೂ ಭವಿಷ್ಯದ ಗೋಶಾಲಾ ಅಭಿವೃದ್ಧಿ ಯೋಜನೆಯ ಮೇರೆಗೆ ರಾಜ್ಯ ಸರ್ಕಾರದ ಕಾರ್ಯಕ್ರಮಗಳ ಯುಕ್ತ ಹಾಗೂ ಸಕಾಲಿಕ ಅನುಷ್ಠಾನ;

(ಡಿ) ಪ್ರಸ್ತುತ ಜಾರಿಯಲ್ಲಿರುವ ಯಾವುದೇ ಅಧಿನಿಯಮಿತಿಯ ಉಲ್ಲಂಘನೆಗಾಗಿ ವಶಪಡಿಸಿಕೊಂಡ ಜಾನುವಾರುಗಳ ಪಾಲನೆ ಹಾಗೂ ನಿರ್ವಹಣೆಯನ್ನು ಖಚಿತಪಡಿಸುವುದು:

(ಇ) ಯಾವುದೇ ಸಂಸ್ಥೆಯು ನಿರ್ವಹಿಸಲಾದ ದುರ್ಬಲ ಹಾಗೂ ವಯಸ್ಸಾದ ಜಾನುವಾರುಗಳ ಯುಕ್ತ ನಿರ್ವಹಣೆ ಹಾಗೂ ಪಾಲನೆಯನ್ನು ಖಚಿತಪಡಿಸುವುದು;

(ಎಫ್) ಆಯೋಗದಲ್ಲಿ ನೋಂದಣಿ ಮಾಡಿದ ಹಾಗೂ ನೋಂದಣಿ ಮಾಡಲು ಉದ್ದೇಶಿಸಿದ ಸಂಸ್ಥೆಗಳ ಮೇಲ್ವಿಚಾರಣೆ ಹಾಗೂ ತಪಾಸಣೆ ನಡೆಸುವುದು;

(ಜಿ) ಆರ್ಥಿಕವಾಗಿ ದುರ್ಬಲವಾದಂಥ ಸಂಸ್ಥೆಗಳನ್ನು ಬಲಪಡಿಸುವಲ್ಲಿ ಸಹಾಯಕವಾಗಬಹುದಾದಂಥ ಕ್ರಮಗಳನ್ನು ಸಲಹೆ ಮಾಡುವುದು;

(ಎಚ್) ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಿದ ಅಂಥ ನಿಬಂಧನೆಗಳು ಹಾಗೂ ಷರತ್ತುಗಳಿಗೊಳಪಟ್ಟು ಸಂಸ್ಥೆಗಳಿಗೆ ಆರ್ಥಿಕ ನೆರವು ನೀಡುವುದು;

(ಐ) ಯಾವುದೇ ಸಂಸ್ಥೆಗಳ ನಿರ್ವಹಣೆಯಲ್ಲಿನ ದೂರುಗಳನ್ನು ವಿಚಾರಣೆ ಮಾಡುವುದು;

(ಜೆ) ರಾಜ್ಯ ಸರ್ಕಾರವು ತನಗೆ ವಹಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು;

(ಕೆ) ಜಾನುವಾರುಗಳ ಕ್ಷೇಮಾಭಿವೃದ್ಧಿ ಸಂಬಂಧದಲ್ಲಿ ಅಧಿನಿಯಮ ಹಾಗೂ ಅಧಿನಿಯಮಿಸಬೇಕಾದ ಅಂಥ ಇತರ ಕಾನೂನುಗಳ ಅನುಷ್ಠಾನಕ್ಕೆ ನೆರವಾಗುವುದು;

(ಎಲ್) ಅಧಿನಿಯಮದ ಮೇರೆಗೆ ವಶಪಡಿಸಿಕೊಳ್ಳಲಾದ ಕೃಷಿ ಸಂಬಂಧಿ ಜಾನುವಾರುಗಳನ್ನು ಅಭಿರಕ್ಷೆಗೆ ತೆಗೆದುಕೊಳ್ಳುವುದು ಹಾಗೂ ಅವುಗಳನ್ನು ಹತ್ತಿರದ ಗೋಶಾಲೆ, ಗೋಸದನ ಅಥವಾ ಯಾವುದೇ ಜಾನುವಾರು ಸಂರಕ್ಷಣಾ ಸಂಸ್ಥೆ ಅಥವಾ ಯಾರೇ ವ್ಯಕ್ತಿಗೆ ಪ್ರಾಸಿಕ್ಯೂಷನ್ ವ್ಯವಹರಣೆಯು ಇತ್ಯರ್ಥವಾಗುವವರೆಗೆ ವಹಿಸುವುದು;

(ಎಂ) ಸುರಕ್ಷ ಕಾನೂನುಗಳು, ಸಂರಕ್ಷಣೆ, ಗೋಶಾಲಾ ನಿರ್ವಹಣೆ ಹಾಗೂ ಇತರ ಸಂಬಂಧಿತ ಚಟುವಟಿಕೆಗಳ ಮೇಲೆ ಪ್ರಾಥಮಿಕ ಹಾಗೂ ಉನ್ನತ ಅಧ್ಯಯನಗಳಲ್ಲಿನ ಶೈಕ್ಷಣಿಕ ಚಟುವಟಿಕೆಗಳನ್ನು ವೃದ್ಧಿಸುವುದು;

(ಎನ್) ಪ್ರಾಣಿ ಕ್ಷೇಮಾಭಿವೃದ್ಧಿ ಚಟುವಟಿಕೆಗಳಲ್ಲಿ ರಾಜ್ಯ, ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾಗವಹಿಸುವುದು ಹಾಗೂ ನೆರವು ಮತ್ತು ಸಲಹೆಗಳನ್ನು ಆಕರ್ಷಿಸುವುದು;

(ಒ) ಸರ್ಕಾರ ಅಥವಾ ಸರ್ಕಾರೇತರ ಸಂಸ್ಥೆಗಳು ವಹಿಸಿಕೊಟ್ಟ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

(ಪಿ) ಸರ್ಕಾರವು ಕಾಲಕಾಲಕ್ಕೆ ಹೊರಡಿಸಬಹುದಾದಂಥ ವಿನಿಯಮಗಳೊಂದಿಗೆ ಗೌರವ ಪ್ರಾಣಿ ಕಲ್ಯಾಣ ಅಧಿಕಾರಿಗಳನ್ನು ನೇಮಿಸುವುದು ಹಾಗೂ ಅಂಥ ಗೌರವ ಪ್ರಾಣಿ ಕಲ್ಯಾಣ ಅಧಿಕಾರಿಗಳು ಅಧಿನಿಯಮದ ಅನುಷ್ಠಾನಕ್ಕಾಗಿ ಕಾರ್ಯ ನಿರ್ವಹಿಸುವುದು ಹಾಗೂ ಸಂಬಂಧಪಟ್ಟ ಪ್ರಾಧಿಕಾರಗಳು ಹಾಗೂ ಇಲಾಖೆಗಳೊಂದಿಗೆ ಸಹಕರಿಸುವುದು;

**12. ಆಯೋಗದ ನಿಧಿಗಳು:–** (1) ಆಯೋಗವು ತನ್ನ ಸ್ವಂತ ನಿಧಿಯನ್ನು ಹೊಂದಿರತಕ್ಕದ್ದು ಹಾಗೂ ಆಯೋಗದ ಎಲ್ಲಾ ಸ್ವೀಕೃತಿಗಳನ್ನು ಅದಕ್ಕೆ ಜಮೆ ಮಾಡತಕ್ಕದ್ದು ಹಾಗೂ ಆಯೋಗದ ಎಲ್ಲಾ ಸಂದಾಯಗಳನ್ನು ಇದರಿಂದಲೇ ನೀಡತಕ್ಕದ್ದು.

(2) ಆಯೋಗವು, ರಾಜ್ಯ ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಹಾಗೂ ಖಾಸಗಿ ಸಂಸ್ಥೆ, ಅದು ನಿಗಮಿತವಾಗಿರಲಿ ಅಥವಾ ಇಲ್ಲದಿರಲಿ, ಅವುಗಳಿಂದ ಅಥವಾ ಯಾವುದೇ ಖಾಸಗಿ ವ್ಯಕ್ತಿಗಳಿಂದ ಸಹಾಯಧನಗಳು, ದೇಣಿಗೆಗಳು ಹಾಗೂ ಕೊಡುಗೆಗಳನ್ನು ಸ್ವೀಕರಿಸಬಹುದು.

(3) ಆಯೋಗದ ಎಲ್ಲಾ ಸ್ವತ್ತುಗಳು, ನಿಧಿಗಳು ಹಾಗೂ ಇತರ ಆಸ್ತಿಗಳನ್ನು ಈ ನಿಯಮಗಳ ಉಪಬಂಧಗಳಿಗೊಳಪಟ್ಟು ಹಾಗೂ ಅಧಿನಿಯಮದ ಉದ್ದೇಶಗಳಿಗಾಗಿ ಇದು ಹೊಂದತಕ್ಕದ್ದು ಮತ್ತು ಇದಕ್ಕೆ ಅನ್ವಯಿಸತಕ್ಕದ್ದು.

**13. ಆಯೋಗದ ಬ್ಯಾಂಕ್‌ಗಳು:–** ಆಯೋಗದ ನಿಧಿಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಇಡತಕ್ಕದ್ದು ಹಾಗೂ ಆಯೋಗದ ಸದಸ್ಯ ಕಾರ್ಯದರ್ಶಿಯು ನಿರ್ವಹಿಸತಕ್ಕದ್ದು.

**14. ದಾಖಲೆಗಳನ್ನು ಕೋರಲು ಆಯೋಗದ ಅಧಿಕಾರ:–** ಆಯೋಗವು ಪ್ರಕಾರ್ಯಗಳನ್ನು ನಿರ್ವಹಿಸುವ ಹಕ್ಕುಗಳನ್ನು ಹೊಂದಿರತಕ್ಕದ್ದು ಹಾಗೂ ಸದರಿ ಅಧಿನಿಯಮಿತಿಗಳನ್ನು ಅನುಷ್ಠಾನಗೊಳಿಸುವ ಯಾವುದೇ ಪ್ರಾಧಿಕಾರದಿಂದ ಯಾವುದೇ ಮಾಹಿತಿ ಅಥವಾ ವರದಿಗಳನ್ನು ಕೋರತಕ್ಕದ್ದು.

**15. ಲೆಕ್ಕಪತ್ರಗಳು ಹಾಗೂ ಲೆಕ್ಕಪರಿಶೋಧನೆ:–** ಆಯೋಗದ ಲೆಕ್ಕಪತ್ರಗಳನ್ನು ಕರ್ನಾಟಕ ಆರ್ಥಿಕ ಸಂಹಿತೆಯಲ್ಲಿ ನಿಯಮಿಸಲಾದ ರೀತಿಯಲ್ಲಿ ಇಡತಕ್ಕದ್ದು. ಆಯೋಗದ ವಾರ್ಷಿಕ ಜಮಾ–ಖರ್ಚು ಪಟ್ಟಿಯನ್ನು ಪ್ರತಿ ವರ್ಷ ರಾಜ್ಯ ಲೆಕ್ಕಪತ್ರಗಳ ಇಲಾಖೆಯು ಲೆಕ್ಕಪರಿಶೋಧನೆ ಮಾಡತಕ್ಕದ್ದು ಹಾಗೂ ಅನುಸರಣಾ ವರದಿಯೊಂದಿಗೆ ಲೆಕ್ಕಪರಿಶೋಧನಾ ವರದಿಯನ್ನು ರಾಜ್ಯ ಸರ್ಕಾರದ ಮೂಲಕ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

**16. ವಾರ್ಷಿಕ ವರದಿ:–** ಆಯೋಗವು, ಆರ್ಥಿಕ ವರ್ಷ ಮುಕ್ತಾಯವಾದ ಮೂರು ತಿಂಗಳುಗಳೊಳಗೆ ಹಿಂದಿನ ಆರ್ಥಿಕ ವರ್ಷದ ಅವಧಿಯ ತನ್ನ ಚಟುವಟಿಕೆಗಳ ಸಂಪೂರ್ಣ ಲೆಕ್ಕವನ್ನು ಒದಗಿಸುವ ವಾರ್ಷಿಕ ವರದಿಯನ್ನು ಪ್ರತಿ ಹಣಕಾಸು ವರ್ಷಕ್ಕೆ ತಯಾರಿಸತಕ್ಕದ್ದು ಹಾಗೂ ರಾಜ್ಯ ಸರ್ಕಾರಕ್ಕೆ ಅದರ ಪ್ರತಿಯನ್ನು ಕಳುಹಿಸತಕ್ಕದ್ದು.

**17. ಆಯೋಗದ ವರದಿ ಬಗ್ಗೆ ಕ್ರಮ:–** (1) 16ನೇ ಪ್ರಕರಣದ ಮೇರೆಗೆ ವರದಿಯನ್ನು ಸ್ವೀಕರಿಸಿದ ತರುವಾಯ ಇದರ ಮೇಲೆ ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಪರಿಗಣಿಸಬಹುದಾದಂಥ ಕ್ರಮವನ್ನು ತೆಗೆದುಕೊಳ್ಳಬಹುದು.

(2) (1)ನೇ ಉಪ–ಪ್ರಕರಣದ ಮೇರೆಗೆ ಸರ್ಕಾರವು ಇದರ ಮೇಲೆ ಕೈಗೊಂಡ ಕ್ರಮದ ವರದಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಮಾಡಿದ ವರದಿಯ ಪ್ರತಿಯನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

**18. ರಾಜ್ಯ ಸರ್ಕಾರವು ವರದಿಗಳು, ವಿವರ ಪಟ್ಟಿಗಳನ್ನು ಕೋರಲು ಅಧಿಕಾರ:–** ರಾಜ್ಯ ಸರ್ಕಾರವು, ತಾನು ಅಗತ್ಯವೆಂದು ಪರಿಗಣಿಸಬಹುದಾದಂತೆ, ಕಾಲಕಾಲಕ್ಕೆ ಆಯೋಗದಿಂದ ಅಂಥ ವರದಿಗಳು, ವಿವರಪಟ್ಟಿಗಳು, ವಿವರಣೆಗಳನ್ನು ಕೋರಬಹುದು.

**19. ರಾಜ್ಯ ಸರ್ಕಾರದ ನಿರ್ದೇಶನಗಳು:–** (1) ರಾಜ್ಯ ಸರ್ಕಾರದಿಂದ ಆಯೋಗವು, ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ, ತನಗೆ ನೀಡಬಹುದಾದಂಥ ಕಾರ್ಯನೀತಿಯಿಂದ ಮಾರ್ಗದರ್ಶನ ಮಾಡತಕ್ಕದ್ದು.

(2) ರಾಜ್ಯ ಸರ್ಕಾರ ಮತ್ತು ಆಯೋಗದ ನಡುವೆ ಒಂದು ಕಾರ್ಯ ನೀತಿಯು ವಿವಾದಾತ್ಮಕವೇ ಅಥವಾ ಇಲ್ಲವೇ ಎಂಬ ಬಗ್ಗೆ ಯಾವುದೇ ವಿವಾದ ಉದ್ಭವಿಸಿದ್ದಲ್ಲಿ, ಆ ಸಂಬಂಧದಲ್ಲಿ ರಾಜ್ಯ ಸರ್ಕಾರದ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

**20. ಆಯೋಗದ ಸದಸ್ಯರು ಸಾರ್ವಜನಿಕ ನೌಕರರಾಗಿರತಕ್ಕದ್ದು:–** ಆಯೋಗದ ಎಲ್ಲ ಸದಸ್ಯರು ಹಾಗೂ ಅಧಿಕಾರಿಗಳನ್ನು ಭಾರತೀಯ ದಂಡ ಸಂಹಿತೆ, 1860 (1860ರ ಸಂ.45)ರ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

**21. ಕರ್ತವ್ಯ ಪಾಲನೆಯಲ್ಲಿ ಲೋಪ:–** (1) ಆಯೋಗವು ತನಗೆ ನೀಡಲಾದ ಯಾವುದೇ ಕರ್ತವ್ಯ ನಿರ್ವಹಣೆಯಲ್ಲಿ ವಿಫಲವಾಗಿದೆ ಎಂಬುದು ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ ಈ ನಿಯಮಗಳ ಮೂಲಕ ಅಥವಾ ಇದರ ಮೇರೆಗೆ ಆ ಕರ್ತವ್ಯದ ನಿರ್ವಹಣೆಗಾಗಿ ಕಾಲವನ್ನು ಗೊತ್ತುಪಡಿಸಬಹುದು.

(2) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ಆಯೋಗವು ತನಗೆ ವಹಿಸಲಾದಂತೆ ಅಂಥ ಅವಧಿಯೊಳಗಾಗಿ ಅಂಥ ಕರ್ತವ್ಯವನ್ನು ಪಾಲಿಸುವಲ್ಲಿ ವಿಫಲ ಅಥವಾ ನಿರ್ಲಕ್ಷ್ಯ ಮಾಡಿದ್ದಲ್ಲಿ, ರಾಜ್ಯ ಸರ್ಕಾರವು, 3ನೇ ನಿಯಮದಲ್ಲಿ ಏನೇ ಇದ್ದಾಗ್ಯೂ ಆಯೋಗವನ್ನು ರದ್ದುಗೊಳಿಸಲು ಮತ್ತು ಪುನರ್ ರಚಿಸಲು ಕಾನೂನು ಸಮ್ಮತವಾಗಿರತಕ್ಕದ್ದು.

(3) ಆಯೋಗವನ್ನು ರದ್ದುಗೊಳಿಸಿದ ಮೇಲೆ ಹಾಗೂ ಅದನ್ನು ಪುನರ್ ರಚಿಸುವ ತನಕ ಈ ನಿಯಮಗಳ ಮೇರೆಗೆ ಆಯೋಗದ ಅಧಿಕಾರಗಳು, ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ರಾಜ್ಯ ಸರ್ಕಾರದಿಂದ ಅಥವಾ ರಾಜ್ಯ ಸರ್ಕಾರವು ಈ ಉದ್ದೇಶಕ್ಕಾಗಿ ನೇಮಕ ಮಾಡಬಹುದಾದಂಥ ಅಧಿಕಾರಿ ಅಥವಾ ಅಧಿಕಾರಿಗಳಿಂದ ನಿರ್ವಹಿಸತಕ್ಕದ್ದು.

**22. ಆಯೋಗದ ಮುಕ್ತಾಯ:–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಆಯೋಗವನ್ನು ಮುಕ್ತಾಯಗೊಳಿಸಲಾಗಿದೆ ಎಂದು ಘೋಷಿಸಬಹುದು:

ಪರಂತು, ಯಾವುದೇ ಅಂಥ ಘೋಷಣೆಯನ್ನು ಜಾರಿಗೊಳಿಸುವ ಬಗ್ಗೆ ಆಯೋಗಕ್ಕೆ ನೋಟೀಸನ್ನು ನೀಡಿದ ಹೊರತು ಮಾಡತಕ್ಕದ್ದಲ್ಲ.

(2) (1)ನೇ ಉಪನಿಯಮದ ಮೇರೆಗೆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ:–

(ಎ) ಆಯೋಗದಲ್ಲಿ ನಿಹಿತಗೊಂಡ ಮತ್ತು ಒಪ್ಪಿಕೊಳ್ಳಬಹುದಾದ ಎಲ್ಲಾ ಸ್ವತ್ತುಗಳು, ನಿಧಿಗಳು ಹಾಗೂ ಬಾಕಿಗಳು ರಾಜ್ಯ ಸರ್ಕಾರದಲ್ಲಿ ನಿಹಿತಗೊಳ್ಳತಕ್ಕದ್ದು ಮತ್ತು ಒಪ್ಪಿಕೊಳ್ಳತಕ್ಕದ್ದು; ಮತ್ತು

(ಬಿ) ಆಯೋಗದ ಸಂಬಂಧ ಸಮ್ಮತಿಸಬಹುದಾದ ಎಲ್ಲಾ ಹೊಣೆಗಾರಿಕೆಗಳನ್ನು ರಾಜ್ಯ ಸರ್ಕಾರದಲ್ಲಿ ನಿಹಿತಗೊಂಡ ಮತ್ತು ವಸೂಲಾದ ಸ್ವತ್ತುಗಳು, ನಿಧಿಗಳು ಮತ್ತು ಬಾಕಿಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ ರಾಜ್ಯ ಸರ್ಕಾರವು ಸಮ್ಮತಿಸತಕ್ಕದ್ದು.

**23. ಸರ್ಕಾರದ ವಿನಿಯಮಗಳ ರಚನಾಧಿಕಾರ:–** ರಾಜ್ಯ ಸರ್ಕಾರವು, ಗೌರವ ಪಶು ಕ್ಷೇಮಾಭಿವೃದ್ಧಿ ಅಧಿಕಾರಿಗಳ ವಿದ್ಯಾರ್ಹತೆಗಳು, ಇದಕ್ಕೆ ಸಂಬಂಧಿಸಿದ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಇತರ ವಿಷಯಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ವಿನಿಯಮಗಳನ್ನು ರಚಿಸಬಹುದು.

## ನಮೂನೆ – ಎ

## ಗೋ ಸೇವಾ ಆಯೋಗದಲ್ಲಿ ಸಂಸ್ಥೆಗಳ ನೋಂದಣಿಗಾಗಿ ಅರ್ಜಿ

1. ಅರ್ಜಿದಾರ/ಟ್ರಸ್ಟ್/ಸಂಘದ ಹೆಸರು:
2. ವಿಳಾಸ ಮತ್ತು ದೂರವಾಣಿ ಸಂಖ್ಯೆ:
3. ಸಂಘ/ಟ್ರಸ್ಟ್‌ನ ನೋಂದಣಿ ಸಂ. ಮತ್ತು ದಿನಾಂಕ:
4. ಎ) ಭಾರತದ ಪಶು ಅಭಿವೃದ್ಧಿ ಮಂಡಲಿಯಲ್ಲಿ ನೋಂದಣಿ ಮಾಡಲಾಗಿದೆಯೇ?

   ಬಿ) ಹಾಗಿದ್ದಲ್ಲಿ, ವಿವರಗಳು:
5. ಅರ್ಜಿದಾರ/ಟ್ರಸ್ಟ್/ಸಂಘವು ಹೊಂದಿರುವ ಭೂಮಿ
6. ನಿರ್ವಹಿಸಿದ ಪಶುಗಳ ಸಂಖ್ಯೆ :
   (ತಳಿವಾರು ಮತ್ತು ವಯಸ್ಸಿನ ವಿವರಗಳನ್ನು ಒದಗಿಸಬೇಕು)
7. ಆಯವ್ಯಯ ಪಟ್ಟಿ, ಆದಾಯ ಮತ್ತು ವೆಚ್ಚದ ಲೆಕ್ಕಗಳು ಮತ್ತು ಸ್ವೀಕೃತಿಗಳು ಹಾಗೂ ಸಂದಾಯದ ಲೆಕ್ಕಗಳನ್ನು ಒಳಗೊಂಡಿರುವ ಕಳೆದ ಎರಡು ವರ್ಷಗಳ ವಾರ್ಷಿಕ ಹಾಗೂ ಪ್ರಗತಿ ವರದಿ ಮತ್ತು ಪರಿಶೋಧಿತ ಲೆಕ್ಕಪತ್ರಗಳ ಒಂದು ಪ್ರತಿ.
8. ಲಭ್ಯವಿರುವ ಮೂಲಭೂತ ಸೌಲಭ್ಯಗಳು:

   ಎ) ಪಶು ಕೊಟ್ಟಿಗೆ :

   ಬಿ) ನೀರಿನ ಸೌಲಭ್ಯಗಳು:

   ಸಿ) ಮೇವು ಲಭ್ಯತೆ:

   ಡಿ) ಪಶುವೈದ್ಯಕೀಯ ಸೇವೆಗಳ ಲಭ್ಯತೆ:

(ಗೊತ್ತುಪಡಿಸಿದ ಶುಲ್ಕಗಳನ್ನು ಅರ್ಜಿಯು ಹೊಂದಿರಬೇಕು)

ದಿನಾಂಕ:
ಸ್ಥಳ: ಅರ್ಜಿದಾರನ ಸಹಿ.

**ನಮೂನೆ – ಬಿ**

**ನೋಂದಣಿ ಪ್ರಮಾಣಪತ್ರ**

ಕರ್ನಾಟಕ ಗೋವಧೆ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆ ಅಧಿನಿಯಮ, 1964 ಮತ್ತು ಕರ್ನಾಟಕ ಗೋವಧೆ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆ (ಗೋ ಸೇವಾ ಆಯೋಗದ ರಚನೆ) ನಿಯಮಗಳು, 2012ರ ಪ್ರಕಾರ ಈ ಕೆಳಗೆ ಹೇಳಲಾದ ಸಂಸ್ಥೆಯನ್ನು ಕರ್ನಾಟಕ ಗೋಸೇವಾ ಆಯೋಗದಲ್ಲಿ ನೋಂದಣಿ ಸಂ........ ರಲ್ಲಿ ನೋಂದಣಿ ಮಾಡಲಾಗಿದೆಯೆಂದು ಪ್ರಮಾಣೀಕರಿಸಲಾಗಿದೆ.

ಸಂಸ್ಥೆಯ ಹೆಸರು ಮತ್ತು ವಿಳಾಸ ..................................................................................................................

.........................................................................................................................

....................................... ರೂ.ಗಳ ಶುಲ್ಕವನ್ನು ಸ್ವೀಕರಿಸಲಾಗಿದೆ.

ನನ್ನ ಸಹಿ ಮತ್ತು ಮೊಹರಿನೊಂದಿಗೆ ...........(ದಿನಾಂಕ)................(ತಿಂಗಳು).........(ವರ್ಷ) ರಂದು ನೀಡಲಾಗಿದೆ.

ಸಹಿ

ಕರ್ನಾಟಕ ಗೋ ಸೇವಾ ಆಯೋಗದ ಕಾರ್ಯದರ್ಶಿ

**ನಮೂನೆ (ಸಿ)**

**ಕರ್ನಾಟಕ ಗೋ ಸೇವಾ ಆಯೋಗದಲ್ಲಿ ನೋಂದಣಿ ಮಾಡಲಾದ ಸಂಸ್ಥೆಗಳ ರಿಜಿಸ್ಟರು**

| ಕ್ರ.ಸಂ. | ಸಂಸ್ಥೆಯ ಹೆಸರು | ವಿಳಾಸ ಮತ್ತು ದೂರವಾಣಿ ಸಂ. | ನೋಂದಣಿಯ ಸಂಖ್ಯೆ ಮತ್ತು ದಿನಾಂಕ | ಸಂದಾಯ ಮಾಡಲಾದ ಶುಲ್ಕ (ರೂ.ಗಳು) | ಷರಾ | ಸಹಿ |
|---|---|---|---|---|---|---|
| | | | | | | |
| | | | | | | |
| | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸರಸಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನಾ ಮತ್ತು ಮೀನುಗಾರಿಕಾ ಇಲಾಖೆ [ಪಶುಸಂಗೋಪನೆ]

## ANIMAL HUSBANDRY & FISHERIES SECRETARIAT

## NOTIFICATION

## No. AHF 68 AHP 2011, Bangalore, dated 05.02.2013

Whereas the draft of the Karnataka Prevention of Cow Slaughter and Cattle Preservation (Constitution of Goseva Ayog) Rules 2012, was published as required by sub-section (1) of Section 19 of the Karnataka Prevention of Cow Slaughter and Cattle Preservation Act, 1964 (Karnataka Act 35 of 1964) in Notification No: AHF 68 AHP 2011, dated 16th August 2012, in part IV-A section 2C(i) of the Karnataka Gazette Extraordinary, dated 21st August 2012, inviting objections and suggestions from all persons likely to be affected thereby, within thirty days from the date of its publication in the Official Gazette.

Whereas, the said Gazette was made available to the public on 21st August 2012.

And, whereas the objections and suggestions received in this behalf have been considered by the State Government.

Now, therefore, in exercise of the powers conferred by Section 18 of the Karnataka Prevention of Cow Slaughter and Cattle Preservation Act, 1964 (Karnataka Act 35 of 1964), the Government of Karnataka hereby makes the following rules, namely:-

## RULES

1. **Title and commencement**:- (1) These rules may be called the Karnataka Prevention of Cow Slaughter and Cattle Preservation (Constitution of Goseva Ayog) Rules, 2012.

(2) They shall come into force from the date of their publication in the official Gazette.

2. **Definitions** :– In this rules, unless the context otherwise requires;-

(a) "Act" means the Karnataka Prevention of Cow Slaughter and Cattle Preservation Act, 1964 (Karnataka Act 35 of 1964);

(b) "Ayog" means the Karnataka State Goseva Ayog established under these rules.

(c) "Chairperson" means the Chairperson of the Ayog;

(d) "Form" means Form appended to these rules.

(e) "Institution" means any charitable institution engaged in cattle welfare and established for the purpose of keeping, breeding, rearing and maintaining cattle or for the purpose of reception, protection, care, management and treatment of infirm, aged and diseased cattle and includes Gosadan, Goshala, Pinjrapole, Goraksha Sanstha and their Federation or Union registered under any enactment for the time being in force or otherwise;

(f) "Member" means a member of the Ayog and includes the Chairperson.

3. **Constitution of Ayog :-** (1) The State Government shall by notification constitute a body to be known as the Karnataka State Goseva Ayog to exercise the powers conferred on and to perform the functions assigned to it.

(2) The Ayog shall consist of the Chairperson and the following members, namely:-

(i) Ex-officio Members. -

(a) The Principal Secretary to Government of Karnataka, Animal Husbandry and Fisheries Department or his nominee not below the rank of Deputy Secretary to Government;

(b) The Principal Secretary to Government of Karnataka, Home Department or his nominee not below the rank of Deputy Secretary to Government;

(c) The Principal Secretary to Government of Karnataka, Revenue Department or his nominee not below the rank of Deputy Secretary to Government;

(d) The Principal Secretary to Government of Karnataka, Rural Development and Panchayat Raj Department or his nominee not below the rank of Deputy Secretary to Government;

(e) The Principal Secretary to Government of Karnataka, Urban Development Department or his nominee not below the rank of Deputy Secretary to Government;

(f) The Commissioner, Animal Husbandry & Veterinary Services;

(g) The Commissioner, Agriculture Department;

(h) The Director, Agriculture Marketing Department;

(i) The Director, Animal Husbandry and Veterinary Services Department -- Member Secretary.

(ii) The State Government shall nominate eleven (11) non-official members having interest in Cattle Welfare, and among them one shall be appointed as Chairperson of the Ayog by the State Government.

(3) Every appointment of non-official members under sub-section (2) shall take effect from the date of notification in the official Gazette.

4. **Qualifications**.- No person shall be eligible for appointment as a non-official member,-

(a) unless he is a citizen of India;

(b) unless he has attained the age of twenty one years;

(c) if he has been adjudged by a Competent Court to be of unsound mind ;

(d) if he has been sentenced by any court to imprisonment for an offence involving moral turpitude;

(e) if he has been dismissed from the service of the State Government for misconduct and has been declared to be disqualified for employment in public service; and

(f) if he is declared as insolvent.

5. **Terms and conditions of appointment of members of the Ayog :-** (1) Every non-official member of the Ayog shall hold office for a period of three years from the date on which the appointment is notified in the official Gazette under rule 3.

(2) There shall be paid to the non-official members such Traveling Allowances and other allowances as are admissible to non-official member as per Annexure-A to the Karnataka Civil Services Rules.

(3) A non-official member may resign his post in writing under his hand addressed to the State Government.

(4) The State Government shall remove a person from the office of non-official member if he;-

(a) becomes an undischarged insolvent ;

(b) is convicted and sentenced to imprisonment for an offence, which in the opinion of the State Government, involves moral turpitude;

(c) becomes of unsound mind and stands so declared by a competent Court ;

(d) refuse to act or becomes incapable of acting ;

(e) is, without obtaining leave of absence from the Ayog, absent from three consecutive meetings of the Ayog; or

(f) has, in the opinion of the State Government so abused the position of Chairperson or Member so as to be detrimental to the interests of livestock or public interest ;

Provided that no person shall be removed under this sub-section until that person has been given a reasonable opportunity of being heard in the matter.

6. **Casual Vacancy:-** Any vacancy arised in the event of death, resignation or disqualification of a non-official member or of his becoming incapable of acting before the expiry of his term of office, such vacancy shall be deemed to have occurred in such office and such vacancy shall be filled as early as possible by appointment of a person thereto as member who shall hold office for the unexpired term of his predecessor.

7. **Headquarter and meetings of the Ayog** – (1) The headquarter of the Ayog shall be at Bangalore.

(2) The Ayog shall meet at least twice in a year, and shall keep record on its proceedings in a minute book. The meetings of the Ayog shall be convened by the Chairperson who shall, when present preside at such meetings and in the absence of the chairperson, the members present shall elect one from amongst themselves to preside as Chairperson.

8. **Vacancy not to invalidate proceedings:-** No act or proceeding of the Ayog shall be deemed to be invalid by reason merely of any vacancy in, or any defect in the constitution of the Ayog.

9. **Appointment of officers and other employees:-** The State Government may, for the purpose of enabling the Ayog to efficiently discharge its functions under this Act provide such number of officers and other employees as may be considered necessary.

10. **Registration of institutions and audit of their accounts.-** (1)After the constitution of this Ayog, every Institution shall within 3 months thereof submit an application in Form-A for registration under these rules to the registering authority along with particulars;

(2) The application shall be accompanied by such fees as may be notified by the Ayog;

(3) The Ayog shall after such enquiry as it deems fit issue a certificate of registration in Form-B.

(4) The Ayog shall maintain a Register of Institution registered with it in Form C.

(5) Whenever any change occurs in any of the particulars relating to any institution recorded in the Register, the person entrusted to act on behalf of the Institution shall report the change to the Ayog which shall after such enquiry as it deems fit make the necessary changes in the Register.

(6) The accounts of every institution which has been registered under this Ayog, shall be balanced each year on the thirty first day of March and its accounts shall be audited by a Chartered Accountant within 2 months after closure of each financial year and the same shall be submitted to the Ayog every year alongwith the Utilization Certificate of formats received from the Ayog.

11. **Functions of the Ayog**:- The Ayog shall discharge following functions for the betterment of the livestock in the State, namely.-

(a) to ensure protection provided to cattle under State Acts, Union Acts and laws for the time being in force;

(b) and to ensure proper and timely implementation of the laws and to propose remedial measures to concerned Departments of the State Government or any body or authority owned or controlled by the State Government as is responsible for such implementation to make them more effective ;

(c) proper and timely implementation of programs of the State Government under present and future Goshala Development Scheme ;

(d) to ensure care and management of cattle seized for violation of any enactment for the time being in force;

(e) to ensure proper management and care of infirm and aged cattle maintained by any Institution ;

(f) to supervise and inspect the institutions registered and proposed to be registered with the Ayog;

(g) to suggest such measures which may be helpful in strengthening of the Institutions which are economically weak;

(h) to give financial assistance to the institutions subject to such terms and conditions specified by the State Government from time to time;

(i) to enquire into complaints in the functioning of any Institutions;

(j) to perform such other functions as may be assigned to it by the State Government ;

(k) to assist in implementation of the Act and such other laws to be enacted in respect of cattle welfare;

(l) to take custody of the agricultural cattle seized under the Act and to entrust them to the nearest Goshala, Gosadan or any Cattle Protection Institution or to any person pending the disposal of the prosecution proceedings;

(m) to promote educational activities in Primary and Higher studies on Safety laws, preservation, Goshala management and other related activities ;

(n) to participate in State, National and International level on animal welfare activities and to attract contributions and suggestions;

(o) to implement programmes entrusted by Government or Non- Government agencies.

(p) to appoint Honorary Animal Welfare Officers with such regulations as may be issued by the Government from time and such honorary Animal Welfare Officers shall work for implementation of the Act and co-ordinate with concerned authorities and department;

**12 Funds of the Ayog -** (1) The Ayog shall have its own fund and all receipts of the Ayog shall be credited thereto and all payments by the Ayog shall be made there from.

(2) The Ayog may accept grants, donations and gifts from the State Government or a local authority, and private body, whether incorporated or not, or from any private individuals.

(3) All properties, funds and other assets of the Ayog shall be held and applied by it, subject to the provisions of these rules and for the purposes of the Act.

**13. Banker of the Ayog** - The funds of the Ayog shall be kept in a Nationalized Bank and shall be operated by the Member Secretary of the Ayog.

**14. Power of the Ayog to call for records** - The Ayog shall have the powers to perform functions and to call for any information or reports from any authority implementing the said enactments.

**15. Accounts and Audit** - The accounts of the Ayog shall be kept in the manner prescribed in Karnataka Financial Code. The annual balance sheet of the Ayog shall be audited by the State Accounts Department every year and Audit Report alongwith compliance shall be laid before each House of the Legislature through State Government.

**16. Annual Report** - The Ayog shall prepare for each financial year its annual report within three months from the closure of the financial year giving a full account of its activities during the previous financial year and forward a copy thereof to the State Government.

**17. Action on Ayog Report –** (1) On receipt of a report under section 16, the State Government may take such action thereon as it considers fit.

(2) A copy of the report made to the State Government together with a report of the action taken thereon by the State Government under sub- section (1) shall be laid on the table of each House of the State Legislature.

**18. Power of the State Government to call for reports, returns etc., -** The State Government may call for such reports, returns, statements from the Ayog from time to time as it considers necessary.

**19. Directions of the State Government:- (1)** In discharge of its function, the Ayog shall be guided by such policy which may be given to it, by the State Government.

(2) If any dispute arises between the State Government and the Ayog as to whether a question is or is not a question of policy, the decision of the State Government shall be final.

**20. Members of the Ayog to be public servants:**- All members and officers of the Ayog shall be deemed to be public servants within the meaning of section 21 of the Indian Penal Code, 1860 (No. 45 of 1860).

**21. Default in performance of duty:–** (1) If the State Government is satisfied that the Ayog has made default in performing any duty imposed on it, by or under these rules, it may fix a period for the performance of that duty.

(2) If in the opinion of the State Government, the Ayog fails or neglects to perform such duty within the period so fixed for its performance, it shall be lawful for the State Government, notwithstanding anything contained in rule 3 to supersede and reconstitute the Ayog.

(3) After the supersession of the Ayog and until it is reconstituted, the powers, duties and functions of the Ayog under these rules shall be carried on by the State Government or by such officer or officers, as the State Government may appoint for this purpose.

**22. Dissolution of the Ayog:-** (1) The State Government may, by notification, declare that with effect from such date as may be specified in the notification, the Ayog may be dissolved ;

Provided that no such declaration shall be made without giving a notice to the Ayog to this effect.

(2) With effect from the date specified in the notification under sub- rule (1).-

(a) all properties, funds and dues which are vested in and realizable by the Ayog shall vest in and be realizable by the State Government; and

(b) all liabilities endorsable against the Ayog shall be endorsable against the State Government to the extent of the properties, funds and dues vested in and realized by the State Government.

**23. Government to make regulations:**- State Government may make separate regulations regarding the qualifications of Honorary Animal Welfare Officers, terms and conditions of appointment and other matters relating to it.

## FORM - A

## Application for Registration of institutions in Go Seva Ayog

| | | |
|---|---|---|
| 1. | Name of the Applicant/Trust/Society | : |
| 2. | Address and Phone No. | : |
| 3. | Society/Trust Registration No. and Date | : |
| 4. | a) Whether registered in the Animal Welfare Board of India? | : |
| | b) If so, details | : |
| 5. | Land owned by the applicant/Trust/Society | : |
| 6. | No. of animals maintained<br>(Breed wise and Age wise details may be furnished) | : |
| 7. | A copy of the Annual cum Progress report and Audited Accounts for the last Two years which contain the Balance Sheet, Income and Expenditure Accounts and receipts and Payment Accounts. | : |
| 8. | Infrastructure available | |
| | a) Animal Shelter | : |
| | b) Water facilities | : |
| | c) Fodder availability | : |
| | d) Availability of Veterinary Services | : |

(The Application should be accompanied by prescribed fees)

Date:

Place: Signature of the Applicant

## FORM - B

### Registration Certificate

This is to certify that as per Karnataka Prevention of Cow Slaughter and Cattle Preservation Act, 1964 and Karnataka Prevention of Cow Slaughter and Cattle Preservation (Constitution of Go Seva Ayog) Rules, 2012, the below said institution has been registered in the Karnataka Go Seva Ayog, Registration No.........................

Name and Address of the Institution: ...............................................................................................

.........................................................................................................................................................

Fee of Rs. ...................... has been received.

Issued on..........(Date)............(Month).....................(Year) under my signature and seal.

**Signature**
Secretary, Karnataka Go Seva Ayog

## FORM (C)

### Register of the institutions registered in Karnataka Go Seva Ayog

| Sl. No. | Name of the Institution | Address and Phone No. | Registration No. and Date | Fee paid (in Rs) | Remarks | Signature |
|---|---|---|---|---|---|---|
| | | | | | | |
| | | | | | | |
| | | | | | | |

By Order and in the name of the Governor of Karnataka

**SARASA**
Under Secretary to Government
Animal Husbandry & Fisheries Department
(Animal Husbandry)


# ವಿಶೇಷ ರಾಜ್ಯ ಪತ್ರಿಕೆ

| ಭಾಗ – I<br>**Part – I** | ಬೆಂಗಳೂರು, ಬುಧವಾರ, ಫೆಬ್ರವರಿ ೬, ೨೦೧೩ (ಮಾಘ ೧೭, ಶಕ ವರ್ಷ ೧೯೩೪)<br>**Bangalore, Wednesday, February 6, 2013 (Magha 17, Shaka Varsha 1934)** | ನಂ. ೧೫೦<br>**No. 150** |
|---|---|---|


## ಸಹಕಾರ ಸಚಿವಾಲಯ

### ಆದೇಶ

**ಸಂಖ್ಯೆ: ಸಿಎಂಡಬ್ಲ್ಯೂ / 02 / ಸಿಎಪಿ / 2006, ಬೆಂಗಳೂರು, ದಿನಾಂಕ 16.01.2013**

ಕರ್ನಾಟಕ ಸರ್ಕಾರದ (ಕಾರ್ಯನಿರ್ವಹಣೆ) ನಿಯಮಗಳು 1977ರ ನಿಯಮ 6ರ ಉಪನಿಯಮ (1)ರಲ್ಲಿ ಪ್ರಧಾನ ಮಾಡಲ್ಪಟ್ಟ ಅಧಿಕಾರವನ್ನು ಪ್ರಯೋಗಿಸುತ್ತಾ, ಜಗದೀಶ್ ಶೆಟ್ಟರ್, ಮುಖ್ಯಮಂತ್ರಿ, ಕರ್ನಾಟಕ ಸರ್ಕಾರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 106 ಮತ್ತು 108ರ ಅಡಿಯಲ್ಲಿ ಸರ್ಕಾರದ ಮುಂದೆ ಇತ್ಯರ್ಥಕ್ಕಾಗಿ ಬಾಕಿ ಇರುವ / ದಾಖಲಾಗುವ ಅಪೀಲು ಮತ್ತು ಪುನರೀಕ್ಷಣಾ ಅರ್ಜಿಗಳನ್ನು ಹಾಗೂ ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 (ಕರ್ನಾಟಕ ಅಧಿನಿಯಮ ಸಂಖ್ಯೆ: 17/2000)ರ ಪ್ರಕರಣ 11(8)ರ ಅಡಿಯಲ್ಲಿ ದಾಖಲಾಗುವ ಅಪೀಲುಗಳನ್ನು ವಿಚಾರಣೆ ಮಾಡಿ ನಿರ್ಣಯಿಸಿ ವಿಲೆ ಮಾಡಲು ಸಹಕಾರ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ವಿಶೇಷವಾಗಿ ನಿರ್ದೇಶನ ನೀಡಿರುತ್ತೇನೆ. ಈ ಆದೇಶವು ಕೂಡಲೇ ಜಾರಿಗೆ ಬಂದಿದ್ದು, ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**ಜಗದೀಶ್ ಶೆಟ್ಟರ**
ಮುಖ್ಯಮಂತ್ರಿ
ಕರ್ನಾಟಕ ಸರ್ಕಾರ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೬, ೨೦೧೩ (ಮಾಘ ೧೭, ಶಕ ವರ್ಷ ೧೯೩೪) | ನಂ. ೧೫೧ |
|---|---|---|
| **Part – IV-A** | **Bangalore, Wednesday, February 6, 2013 (Magha 17, Shaka Varsha 1934)** | **No. 151** |



## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 75 ಶಾಸನ 2012, ಬೆಂಗಳೂರು, ದಿನಾಂಕ: 06.02.2013**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ವಿಧೇಯಕ, 2012 ಇದಕ್ಕೆ 2013ರ ಫೆಬ್ರವರಿ ತಿಂಗಳ ಎರಡನೇ ದಿನಾಂಕದಂದು ಘನತೆವೆತ್ತ ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 12 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013 ರ ಕರ್ನಾಟಕ ಅಧಿನಿಯಮ ಸಂಖ್ಯೆ: 12**

(2013ರ ಫೆಬ್ರವರಿ ಮಾಹೆಯ ಆರನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012

(2013ರ ಫೆಬ್ರವರಿ ಮಾಹೆಯ ಎರಡನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ರಾಜ್ಯದ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು/ಸರ್ಕಾರಿ ಪಾಲಿಟೆಕ್ನಿಕ್‌ಗಳು ಮತ್ತು ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆಗಳು/ಎಸ್‌ಟಿಇಆರ್‌ಐಸಿಗಳಲ್ಲಿ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ಲಭ್ಯತೆಯನ್ನು ಖಚಿತಪಡಿಸಿಕೊಳ್ಳಲು ತಾಂತ್ರಿಕ ಶಿಕ್ಷಣ ಇಲಾಖೆಯ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಂತ್ರಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ಅಧಿನಿಯಮ.

ರಾಜ್ಯದಾದ್ಯಂತ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು / ಸರ್ಕಾರಿ ಪಾಲಿಟೆಕ್ನಿಕ್‌ಗಳು ಮತ್ತು ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆಗಳು/ಎಸ್‌ಟಿಇಆರ್‌ಐಸಿಗಳಲ್ಲಿ ಪ್ರಾಂಶುಪಾಲರು, ಬೋಧಕ / ಬೋಧಕೇತರ ಸಿಬ್ಬಂದಿಯ ಲಭ್ಯತೆಯ ಪಾರದರ್ಶಕತೆಯನ್ನು ಖಚಿತಪಡಿಸಿಕೊಳ್ಳಲು ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಯನ್ನು ನಿಯಂತ್ರಿಸುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅವುಗಳಿಗೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಕಾಲೇಜು ತಾಂತ್ರಿಕ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಈ ಅಧಿನಿಯಮದ ಉಪಬಂಧಗಳು ನಿರ್ದೇಶಕರು, ಅಪರ ನಿರ್ದೇಶಕರು, ಜಂಟಿ ನಿರ್ದೇಶಕರು, ಉಪ ನಿರ್ದೇಶಕರ ಹುದ್ದೆಯನ್ನು ಹೊರತುಪಡಿಸಿ ತಾಂತ್ರಿಕ ಶಿಕ್ಷಣ ಇಲಾಖೆಯ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಗೆ ಅನ್ವಯವಾಗತಕ್ಕದ್ದು.

(3) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ನೇಮಕಾತಿ"** ಎಂದರೆ, ನೇರ ನೇಮಕಾತಿ ಮೂಲಕ, ನಿಯುಕ್ತಿಯ ಮೂಲಕ ಅಥವಾ ಬಡ್ತಿಯ ಮೂಲಕ ನೇಮಕಾತಿ;

(ಬಿ) **"ನೇಮಕಾತಿ ಪ್ರಾಧಿಕಾರ"** ಎಂದರೆ, ಕರ್ನಾಟಕ ತಾಂತ್ರಿಕ ಶಿಕ್ಷಣ ಇಲಾಖೆ ಸೇವೆಯಲ್ಲಿನ ಯಾವುದೇ ಹುದ್ದೆಗೆ ನೇಮಕಾತಿ ಮಾಡಲು ಸಕ್ಷಮವಾದ ಸಂಬಂಧಪಟ್ಟ ಪ್ರಾಧಿಕಾರ;

(ಸಿ) **"ಸಕ್ಷಮ ಪ್ರಾಧಿಕಾರ"** ಎಂದರೆ, ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ಅಥವಾ ನೇಮಕಾತಿ ಆದೇಶಗಳನ್ನು ಹೊರಡಿಸಲು ಸಕ್ಷಮವಾದ ಪ್ರಾಧಿಕಾರ:

**ವಿವರಣೆ:** (1) ಗ್ರೂಪ್ ಎ ವೃಂದದ ಅಡಿಯಲ್ಲಿ ಬರುವ ಎಲ್ಲಾ ನೌಕರರ ಸಂಬಂಧದಲ್ಲಿ ನೇಮಕಾತಿ ಮತ್ತು ವರ್ಗಾವಣೆ ಆದೇಶಗಳನ್ನು ಹೊರಡಿಸುವುದಕ್ಕೆ ಸರ್ಕಾರವು ಸಕ್ಷಮ ಪ್ರಾಧಿಕಾರವಾಗಿರತಕ್ಕದ್ದು.

(2) ಗ್ರೂಪ್ ಬಿ ವೃಂದ ಮತ್ತು ದ್ವಿತೀಯ ದರ್ಜೆ ಸಹಾಯಕರ ದರ್ಜೆಗೆ ಮೇಲಿನ ಗ್ರೂಪ್ ಸಿ ವೃಂದದ ಅಡಿಯಲ್ಲಿ ಬರುವ ಎಲ್ಲಾ ನೌಕರರ ಸಂಬಂಧದಲ್ಲಿ ನೇಮಕಾತಿ ಮತ್ತು ವರ್ಗಾವಣೆ ಆದೇಶಗಳನ್ನು ಹೊರಡಿಸಲು ತಾಂತ್ರಿಕ ಶಿಕ್ಷಣ ನಿರ್ದೇಶಕರು ಸಕ್ಷಮ ಪ್ರಾಧಿಕಾರವಾಗಿರತಕ್ಕದ್ದು.

(3) ಎಲ್ಲಾ ಗ್ರೂಪ್ ಡಿ ಸಿಬ್ಬಂದಿಯ ಸಂಬಂಧದಲ್ಲಿ ನೇಮಕಾತಿ ಮತ್ತು ವರ್ಗಾವಣೆ ಆದೇಶಗಳನ್ನು ಹೊರಡಿಸಲು ತಾಂತ್ರಿಕ ಶಿಕ್ಷಣದ ಆಡಳಿತ ಅಧಿಕಾರಿಯು ಸಕ್ಷಮ ಪ್ರಾಧಿಕಾರವಾಗಿರತಕ್ಕದ್ದು.

(ಡಿ) "ತಾಂತ್ರಿಕ ಶಿಕ್ಷಣ ಇಲಾಖೆಯ ಕಾಲೇಜು ಅಥವಾ ಸಂಸ್ಥೆ" ಎಂದರೆ,–

(i) ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯ ಅಡಿಯಲ್ಲಿ ಬರುವ ಸರ್ಕಾರಕ್ಕೆ ಸೇರಿದ "ಸರ್ಕಾರಿ ಇಂಜಿನಿಯರಿಂಗ್ ಕಾಲೇಜು";

(ii) ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯ ಅಡಿಯಲ್ಲಿ ಬರುವ ಸರ್ಕಾರಕ್ಕೆ ಸೇರಿದ "ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು";

(iii) ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯ ಅಡಿಯಲ್ಲಿ ಬರುವ ಸರ್ಕಾರಕ್ಕೆ ಸೇರಿದ "ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆ";

(ಇ) "ಪ್ರತಿ ನಿಯೋಜನೆ" ಎಂದರೆ, ಸಿಬ್ಬಂದಿಯು ಕಾರ್ಯನಿರ್ವಹಿಸುತ್ತಿರುವ ಕಾಲೇಜು ಶಿಕ್ಷಣ ಇಲಾಖೆಯ ಒಂದು ಕಚೇರಿ/ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು/ಸರ್ಕಾರಿ ಪಾಲಿಟೆಕ್ನಿಕ್‌ಗಳು ಮತ್ತು ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆಗಳು/ ಎಸ್‌ಟಿಇ ಆರ್‌ಇಸಿ ನಿಂದ ಪೂರ್ಣವಾಗಿ ಅಥವಾ ಭಾಗಶ:ವಾಗಿ ಆ ಸಿಬ್ಬಂದಿಯ ಸೇವೆಗಳನ್ನು ಲೀನ್ ಅನ್ನು ಬಿಟ್ಟು ಕೊಡದೇ ಮತ್ತೊಂದು ಕಚೇರಿ ಅಥವಾ ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು/ಸರ್ಕಾರಿ ಪಾಲಿಟೆಕ್ನಿಕ್‌ಗಳು ಮತ್ತು ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆಗಳು/ ಎಸ್‌ಟಿಇ ಆರ್‌ಇಸಿ ಗೆ ಪ್ರತಿನಿಯೋಜನೆ ಮಾಡುವುದು;

(ಎಫ್) "ಬೋಧಕೇತರ ಸಿಬ್ಬಂದಿ" ಎಂದರೆ, ರಾಜ್ಯ ಸಿವಿಲ್ ಸೇವೆಗಳಿಗೆ ಸೇರಿದ ತಾಂತ್ರಿಕ ಶಿಕ್ಷಣ ಇಲಾಖೆಯ ವಿವಿಧ ಕಚೇರಿಗಳಲ್ಲಿ ಅಥವಾ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು ಅಥವಾ ಸರ್ಕಾರಿ ಪಾಲಿಟೆಕ್ನಿಕ್‌ಗಳು ಮತ್ತು ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆಗಳು ಅಥವಾ ಎಸ್‌ಟಿಇಆರ್‌ಐಸಿ ಯಲ್ಲಿ ಗ್ರೂಪ್-ಎ, ಗ್ರೂಪ್-ಬಿ, ಗ್ರೂಪ್-ಸಿ ಅಥವಾ ಗ್ರೂಪ್- ಡಿ ಬೋಧಕೇತರ ಹುದ್ದೆಗಳ ಯಾವುದೇ ಪ್ರವರ್ಗಕ್ಕೆ ಸೇರಿದ ಮತ್ತು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಅಂಥ ಇತರ ಹುದ್ದೆಗಳಿಗೆ ನೇಮಕವಾದ ವ್ಯಕ್ತಿ;

(ಜಿ) "ಪ್ರಾಂಶುಪಾಲ" ಎಂದರೆ, ರಾಜ್ಯ ಸಿವಿಲ್ ಸೇವೆಗಳಿಗೆ ಸೇರಿದ ಕರ್ನಾಟಕ ಇಂಜಿನಿಯರಿಂಗ್ ಕಾಲೇಜುಗಳ ಪ್ರಾಂಶುಪಾಲ, ಸರ್ಕಾರಿ ಪಾಲಿಟೆಕ್ನಿಕ್‌ನಲ್ಲಿ ಪ್ರಾಂಶುಪಾಲ ಗ್ರೇಡ್-I ಅಥವಾ ಗ್ರೇಡ್-II ಅಥವಾ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದಲ್ಲಿ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರ ಹುದ್ದೆಗೆ ಸಮನಾದ, ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆಯಲ್ಲಿ ಪ್ರಾಂಶುಪಾಲ ಹುದ್ದೆಯ ಮತ್ತು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದಂತೆ ಅಂಥ ಇತರ ಸಮಾನ ಹುದ್ದೆಗಳ ಪ್ರವರ್ಗಕ್ಕೆ ನೇಮಕವಾದ ವ್ಯಕ್ತಿ;

(ಎಚ್) "ಕೌನ್ಸಿಲಿಂಗ್ ಪ್ರಕ್ರಿಯೆ", ವರ್ಗಾವಣೆಯನ್ನು, ನೇಮಕಾತಿಗಾಗಿ ಪರಿಗಣಿಸಲ್ಪಟ್ಟ ವ್ಯಕ್ತಿಗೆ ಅಥವಾ ವರ್ಗಾವಣೆಗಾಗಿ ಪರಿಗಣಿಸಲ್ಪಟ್ಟ ಸರ್ಕಾರಿ ನೌಕರನೊಬ್ಬನಿಗೆ, ಆತನು ಕೆಲಸ ಮಾಡುವ ಸ್ಥಳದಲ್ಲಿ ಆತನು ಸಲ್ಲಿಸಿದ ಸೇವಾವಧಿಯ ಆಧಾರದ ಮೇಲೆ ಒಂದು ಸ್ಥಳ ಅಥವಾ ಹುದ್ದೆಯನ್ನು ಆದ್ಯತೆಯ ಮೇಲೆ ಆಯ್ಕೆ ಮಾಡಿಕೊಳ್ಳಲು ಅವಕಾಶಗಳನ್ನು ನೀಡುವ ಮೂಲಕ ಮತ್ತು ನಿಯಮಿಸಬಹುದಾದ ಅಂಥ ಇತರ ಮಾನದಂಡಗಳ ಮೇಲೆ ಗಣಕೀಕೃತ ಕೌನ್ಸಿಲಿಂಗ್ ಪ್ರಕ್ರಿಯೆ;

(ಐ) "ಅನುಸೂಚಿ" ಎಂದರೆ ಈ ಅಧಿನಿಯಮಕ್ಕೆ ಲಗತ್ತಿಸಲಾದ ಅನುಸೂಚಿ;

(ಜೆ) "ಎಸ್‌ಟಿಇಆರ್‌ಐಸಿ" ಎಂದರೆ ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯ ಅಡಿಯಲ್ಲಿ ಬರುವ ರಾಜ್ಯ ತಾಂತ್ರಿಕ ಶಿಕ್ಷಣ ಸಂಪನ್ಮೂಲಗಳು ಮತ್ತು ಮಾಹಿತಿ ಕೇಂದ್ರ;

(ಕೆ) "ಬೋಧಕ ಸಿಬ್ಬಂದಿ" ಎಂದರೆ,-

(i) ರಾಜ್ಯ ಸಿವಿಲ್ ಸೇವೆಗಳಿಗೆ ಸೇರಿದ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸಹ ಪ್ರಾಧ್ಯಾಪಕ/ಸಹಾಯಕ ಪ್ರಾಧ್ಯಾಪಕ/ಪ್ರಾಧ್ಯಪಕ/ಗ್ರಂಥಪಾಲಕ/ದೈಹಿಕ ಶಿಕ್ಷಣ ಮತ್ತು ಕ್ರೀಡೆಗಳ ಸಹಾಯಕ ನಿರ್ದೇಶಕ/ನಿಯೋಜನೆ ಅಧಿಕಾರಿ ಹುದ್ದೆಗಳ ಮತ್ತು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದಂತೆ ಅಂಥ ಇತರ ಹುದ್ದೆಗಳ ಯಾವುದೇ ಪ್ರವರ್ಗಕ್ಕೆ ನೇಮಕವಾದ ವ್ಯಕ್ತಿ;

(ii) ಕರ್ನಾಟಕ ಸಿವಿಲ್ ಸೇವೆಗಳಿಗೆ ಸೇರಿದ ಸರ್ಕಾರಿ ಪಾಲಿಟೆಕ್ನಿಕ್ ನಲ್ಲಿ ವಿಭಾಗದ ಮುಖ್ಯಸ್ಥರು, ಪ್ರಾಧ್ಯಾಪಕರು ಮತ್ತು ಸಹಾಯಕ ಉಪನ್ಯಾಸಕರ ಹುದ್ದೆಗಳ ಮತ್ತು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಅಂಥ ಇತರ ಹುದ್ದೆಗಳ ಪ್ರವರ್ಗಕ್ಕೆ ನೇಮಕವಾದ ಒಬ್ಬ ವ್ಯಕ್ತಿ;

(iii) ಕರ್ನಾಟಕ ಸಿವಿಲ್ ಸೇವೆಗಳಿಗೆ ಸೇರಿದ ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆಯಲ್ಲಿ ಉಪನ್ಯಾಸಕರು ಮ್ತು ಸಹಾಯಕ ಉಪನ್ಯಾಸಕರ ಹುದ್ದೆಗಳ ಮತ್ತು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಅಂಥ ಇತರ ಹುದ್ದೆಗಳ ಪ್ರವರ್ಗಕ್ಕೆ ನೇಮಕವಾದ ಒಬ್ಬ ವ್ಯಕ್ತಿ.

(ಎಲ್) "ವರ್ಗಾವಣೆ" ಎಂದರೆ ಸಿಬ್ಬಂದಿಯನ್ನು ಒಂದು ಹುದ್ದೆ ಅಥವಾ ಕಚೇರಿಯಿಂದ ಮತ್ತೊಂದು ಹುದ್ದೆ ಅಥವಾ ಕಚೇರಿಗೆ, ಕಾರ್ಯನಿರ್ವಹಿಸುತ್ತಿರುವ ಒಂದು ಸ್ಥಳದಿಂದ ಕಾರ್ಯನಿರ್ವಹಿಸುತ್ತಿರುವ ಮತ್ತೊಂದು ಸ್ಥಳದ ಹುದ್ದೆಗೆ ನಿಯೋಜಿಸುವುದು ಮತ್ತು ಇದು ಅದೇ ವಲಯ ಅಥವಾ ವೃಂದದೊಳಗೆ ಅಥವಾ ಹೊರಗಿನ ವರ್ಗಾವಣೆಯನ್ನು ಒಳಗೊಳ್ಳುತ್ತದೆ;

(ಎಂ) "ಜ್ಯೇಷ್ಠತಾ ಘಟಕ" ಎಂದರೆ:-

(i) ತಾಂತ್ರಿಕ ಶಿಕ್ಷಣ ಇಲಾಖೆಯ ಪ್ರಾಂಶುಪಾಲ, ಎಲ್ಲಾ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯ (ಗ್ರೂಪ್ -ಡಿ ಹುದ್ದೆಗಳ ಪ್ರವರ್ಗವನ್ನು ಹೊರತುಪಡಿಸಿ) ನಿಯೋಜನೆಯ ಉದ್ದೇಶಕ್ಕಾಗಿ ಜ್ಯೇಷ್ಠತಾ ಘಟಕವು ರಾಜ್ಯವಾಗಿರತಕ್ಕದ್ದು;

(ii) ತಾಂತ್ರಿಕ ಶಿಕ್ಷಣ ಇಲಾಖೆಯ ಹುದ್ದೆಗಳ ಗ್ರೂಪ್ -ಡಿ ಪ್ರವರ್ಗಗಳಿಗಾಗಿ, ಜೇಷ್ಠತಾ ಘಟಕವು, ಜಿಲ್ಲೆ ಆಗಿರತಕ್ಕದ್ದು;

(ಎನ್) "ವಲಯ" ಎಂದರೆ ಸಿಬ್ಬಂದಿಯ ವರ್ಗಾವಣೆಯ ಉದ್ದೇಶಕ್ಕಾಗಿ ವಲಯವಾಗಿ ವರ್ಗೀಕರಿಸಲಾದ ನಿರ್ದಿಷ್ಟ ಪ್ರದೇಶಗಳು ಮತ್ತು,

I. "ವಲಯ - ಎ" ಎಂದರೆ,-

(ಎ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿಬಿಎಂಪಿ) ಮಿತಿಗಳ ಅಡಿಯಲ್ಲಿ ಬರುವ ಪ್ರದೇಶಗಳು ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ (ಬಿಡಿಎ) ಮಿತಿಗಳ ಅಡಿಯಲ್ಲಿ ಬರುವ ಪ್ರದೇಶ;

(ಬಿ) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅಡಿಯಲ್ಲಿ ರಚಿತವಾದ ನಗರ ಪಾಲಿಕೆಗಳ ಮಿತಿಗಳ ಅಡಿಯಲ್ಲಿ ಬರುವ ಪ್ರದೇಶಗಳು; ಮತ್ತು

(ಸಿ) ಎಲ್ಲಾ ಜಿಲ್ಲೆಗಳ ಜಿಲ್ಲಾ ಕೇಂದ್ರ ಸ್ಥಾನಗಳು ಮತ್ತು ನಗರ ಸಭೆ/ಸಿಟಿ ಮುನಿಸಿಪಾಲಿಟಿ ಮಿತಿಗಳ ಅಡಿಯಲ್ಲಿ ಬರುವ ಪ್ರದೇಶಗಳು;

II. "ವಲಯ – ಬಿ" ಎಂದರೆ, ವಲಯ–ಎ ಅಡಿಯಲ್ಲಿ ಬರುವ ಪ್ರದೇಶವನ್ನು ಹೊರತುಪಡಿಸಿ ಎಲ್ಲಾ ಜಿಲ್ಲೆಗಳ ತಾಲ್ಲೂಕು ಕೇಂದ್ರಸ್ಥಾನಗಳಲ್ಲಿ ಮತ್ತು ಪಟ್ಟಣ ಮುನಿಸಿಪಾಲಿಟಿ ಅಡಿಯಲ್ಲಿ ಬರುವ ಪ್ರದೇಶಗಳು;

III. "ವಲಯ – ಸಿ" ಎಂದರೆ, ವಲಯ–ಎ ಮತ್ತು ವಲಯ–ಬಿ ಹೊರಗೆ ಬರುವ ಪ್ರದೇಶಗಳು.

(2) ಇದರಲ್ಲಿ ಬಳಸಲಾದ ಆದರೆ ಈ ಅಧಿನಿಯಮದಲ್ಲಿ ಪರಿಭಾಷಿಸಿರದ ಇತರ ಪದಗಳು ಮತ್ತು ಪದಾವಳಿಗಳು ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ, 1978ರಲ್ಲಿ (1990ರ ಕರ್ನಾಟಕ ಅಧಿನಿಯಮ 14) ಅವುಗಳಿಗೆ ಗೊತ್ತುಪಡಿಸಿರುವ ಅದೇ ಅರ್ಥವನ್ನು ಹೊಂದಿರತಕ್ಕದ್ದು.

**3. ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ವಲಯ–ಸಿ ಗೆ ಕಡ್ಡಾಯವಾಗಿ ನೇಮಕ ಮಾಡುವುದು.–** (1) ಪ್ರತಿಯೊಂದು ನೇಮಕಾತಿ ಪ್ರಾಧಿಕಾರವು. ತಾಂತ್ರಿಕ ಶಿಕ್ಷಣ ಇಲಾಖೆಯ ಯಾವುದೇ ಕಾಲೇಜು ಅಥವಾ ಸಂಸ್ಥೆಗೆ ಪ್ರಾಂಶುಪಾಲರು/ ಬೋಧಕ/ ಬೋಧಕೇತರ ಸಿಬ್ಬಂದಿಯನ್ನು ಪ್ರಥಮವಾಗಿ ನೇಮಕಾತಿ ಮಾಡುವಾಗ, ಮೊದಲಿಗೆ ವಲಯ–ಸಿಯಲ್ಲಿನ ಹುದ್ದೆಗಳು ಭರ್ತಿಯಾಗತಕ್ಕದ್ದೆಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(2) ಮೊದಲ ಹಂತದ ನೇಮಕ ಅಥವಾ ವರ್ಗಾವಣೆಗೆ ಯಾವುದೇ ಖಾಲಿ ಹುದ್ದೆ ಲಭ್ಯವಿಲ್ಲದಿದ್ದಲ್ಲಿ, ಕನಿಷ್ಠ ಸಂಖ್ಯೆಯ ವರ್ಷಗಳ ಸೇವೆಯನ್ನು ಅಥವಾ ಹೆಚ್ಚಿನ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ವಲಯ–ಸಿ ಇಂದ ವಲಯ–ಬಿ ಗೆ ಮತ್ತು ವಲಯ–ಬಿ ಇಂದ ವಲಯ–ಎ ಗೆ ಆದ್ಯತೆಯ ಪ್ರಕಾರ ಇನ್ನೊಂದು ವಲಯಕ್ಕೆ ವರ್ಗಾವಣೆ ಮಾಡುವ ಮೂಲಕ ಒಂದು ಖಾಲಿ ಹುದ್ದೆಯನ್ನು ಸೃಜಿಸಬಹುದು:

ಪರಂತು, ಮೇಲಿನ ಷರತ್ತು, ಯಾವುದೇ ವಲಯದಲ್ಲಿ ಯಾವುದೇ ಹುದ್ದೆಯು ಲಭ್ಯವಿಲ್ಲದಿರುವ ವೃಂದಕ್ಕೆ ಅನ್ವಯವಾಗತಕ್ಕದ್ದಲ್ಲ.

(3) (ಎ) ವಲಯ–ಸಿ, ವಲಯ–ಬಿ ಮತ್ತು ವಲಯ–ಎ ಗೆ ವರ್ಗಾವಣೆಗೆ ಅರ್ಹತೆ ಹೊಂದಲು ಪೂರ್ಣಗೊಳಿಸಬೇಕೆಂದು ಅಗತ್ಯಪಡಿಸಲಾದ ಕನಿಷ್ಠ ಸೇವಾವಧಿಯು ನಿಯಮಗಳಲ್ಲಿ ಗೊತ್ತುಪಡಿಸಿರುವಂತೆ ಇರತಕ್ಕದ್ದು.

(ಬಿ) ಕನಿಷ್ಠ ಸೇವಾವಧಿಯನ್ನು ಪೂರ್ಣಗೊಳಿಸಿರುವ ಯಾವೊಬ್ಬ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿ ಲಭ್ಯವಿರದಿದ್ದರೆ, ಗೊತ್ತುಪಡಿಸಿರುವ ಅವಧಿಗಿಂತ ಕಡಿಮೆ ಇರುವ ಗರಿಷ್ಠ ಸಂಖ್ಯೆಯ ವರ್ಷಗಳ ಅವಧಿಗೆ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯಾಗಿ ಸೇವೆಯನ್ನು ಪೂರ್ಣಗೊಳಿಸಿರುವ ವ್ಯಕ್ತಿಯನ್ನು ಮೇಲ್ಕಂಡಂತೆ ವರ್ಗಾವಣೆಗಾಗಿ ಪರಿಗಣಿಸಬಹುದು:

ಪರಂತು, ವಲಯ–ಸಿ ಯಲ್ಲಿ ಸೇವೆ ಸಲ್ಲಿಸುತ್ತಿರುವ ಯಾವೊಬ್ಬ ಪ್ರಾಂಶುಪಾಲನು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಲಯ –ಬಿ ಗೆ ವರ್ಗಾವಣೆಗೊಳ್ಳಲು ಅರ್ಹರಾಗಿರುವ ಸಂದರ್ಭದಲ್ಲಿ ಮತ್ತು ಹಾಗೆಯೇ ವಲಯ–ಬಿ ಯಲ್ಲಿ ಸೇವೆ ಸಲ್ಲಿಸುತ್ತಿರುವ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಲಯ–ಎ ಗೆ ವರ್ಗಾವಣೆಗೊಳ್ಳಲು ಅರ್ಹರಾಗಿರುವ ಸಂದರ್ಭದಲ್ಲಿ, ಆದರೆ ಅವರು, ಸಂದರ್ಭಾನುಸಾರವಾಗಿ, ವಲಯ–ಸಿ ಅಥವಾ ವಲಯ–ಬಿ ಯಲ್ಲಿ ಸೇವೆಯನ್ನು ಮುಂದುವರಿಸಲು ಇಚ್ಛಿಸಿದರೆ, ತಮ್ಮ ತಮ್ಮ ವಲಯಗಳಲ್ಲಿ ಸೇವೆಯನ್ನು ಮುಂದುವರಿಸಲು ಅವಕಾಶ ನೀಡಬಹುದು.

**ವಿವರಣೆ:** ಆದ್ಯತೆಯ ಕ್ರಮವನ್ನು, ಇತರ ವಿಷಯಗಳ ಜೊತೆಗೆ, ಒಂದು ವಲಯದಲ್ಲಿ ವಿವಿಧ ವೃಂದಗಳಲ್ಲಿ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ಸೇವಾ ವರ್ಷಗಳ ಒಟ್ಟು ಸಂಖ್ಯೆಯ ಆಧಾರದ ಮೇಲೆ ಮತ್ತು ನಿಯಮಿಸಬಹುದಾದಂಥ ಯಾವುದೇ ಇತರ ಮಾನದಂಡದ ಆಧಾರದ ಮೇಲೆ ಲೆಕ್ಕ ಹಾಕತಕ್ಕದ್ದು.

(ಸಿ) ವಲಯ–ಎ ಅಥವಾ ವಲಯ–ಬಿ ಯಲ್ಲಿರುವ ಮತ್ತು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ಅಡಿಯಲ್ಲಿ ವಿಧಿಸಲಾದ ಯಾವುದೇ ಕಾಲಬದ್ಧ ದಂಡನೆಯ ಶಿಕ್ಷೆಯನ್ನು ಅನುಭವಿಸುತ್ತಿರುವ ಅಥವಾ ನ್ಯಾಯಾಲಯದಲ್ಲಿ ಯಾವುದೇ ಕ್ರಿಮಿನಲ್ ಆರೋಪಗಳನ್ನು ಎದುರಿಸುತ್ತಿರುವ ಒಬ್ಬ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ವಲಯ–ಸಿ ಗೆ ವರ್ಗಾವಣೆ ಮಾಡಬಹುದು, ವಲಯ–ಸಿ ಯಲ್ಲಿ ಯಾವುದೇ ಖಾಲಿ ಹುದ್ದೆ ಇಲ್ಲದಿದ್ದರೆ, (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ಒಂದು ಖಾಲಿ ಹುದ್ದೆಯನ್ನು ಸೃಜಿಸಬಹುದು:

ಪರಂತು, ಅಂಥ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಲಯ–ಸಿ ಯಲ್ಲಿ ಕಾರ್ಯನಿರ್ವಹಿಸುತ್ತಿದ್ದರೆ, ಅವನು ಕೆಲಸ ಮಾಡುತ್ತಿರುವ ಒಂದು ಸ್ಥಳದಿಂದ ಅದೇ ವಲಯದಲ್ಲಿನ ಇನ್ನೊಂದು ಸ್ಥಳಕ್ಕೆ ಅವನನ್ನು ವರ್ಗಾವಣೆ ಮಾಡತಕ್ಕದ್ದು, ಆದರೆ ಅಂಥ ಶಿಸ್ತು ವ್ಯವಹರಣೆಗಳು, ಕ್ರಿಮಿನಲ್ ವ್ಯವಹರಣೆ ಅಥವಾ ದಂಡನೆಯು ಪೂರ್ಣಗೊಳ್ಳುವವರೆಗೆ ಅವನನ್ನು ವಲಯ–ಸಿ ಯಿಂದ ಹೊರಗೆ ವರ್ಗಾವಣೆ ಮಾಡತಕ್ಕದ್ದಲ್ಲ.

**4. ಕೌನ್ಸಿಲಿಂಗ್ ಮೂಲಕ ವರ್ಗಾವಣೆ.–** ಈ ಅಧಿನಿಯಮದ ಅಡಿಯಲ್ಲಿ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಮಿಸಬಹುದಾದ ಅಂಥ ರೀತಿಯಲ್ಲಿ ನಡೆಸಲಾಗುವ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ ಮಾಡತಕ್ಕದ್ದು:

ಪರಂತು, ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಗ್ರೂಪ್ – ಡಿ ಪ್ರವರ್ಗದಲ್ಲಿ ಕೆಲಸ ಮಾಡುತ್ತಿರುವ ಒಬ್ಬ ವ್ಯಕ್ತಿಯನ್ನು ಜಿಲ್ಲೆಯೊಳಗೆ ವರ್ಗಾವಣೆ ಮಾಡಬಹುದು:

ಪರಂತು, ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಗ್ರೂಪ್ – ಡಿ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ಒಬ್ಬ ವ್ಯಕ್ತಿಯನ್ನು, ಆತನ/ಆಕೆಯ ಕೋರಿಕೆಯ ಮೇಲೆ ಮಾತ್ರವೇ ಒಂದು ಜಿಲ್ಲೆಯಿಂದ ಇನ್ನೊಂದು ಜಿಲ್ಲೆಗೆ ವರ್ಗಾವಣೆ ಮಾಡಬಹುದು.

**5. ಸಾರ್ವಜನಿಕ ಸೇವೆಯ ಹಿತದೃಷ್ಟಿಯಿಂದ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ (ಗ್ರೂಪ್–ಡಿ ಹೊರತುಪಡಿಸಿ) ವರ್ಗಾವಣೆ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಸೇವೆಯಲ್ಲಿರುವ ಮತ್ತು ತಾಂತ್ರಿಕ ಶಿಕ್ಷಣ ಇಲಾಖೆಯ ಯಾವುದೇ ಕಚೇರಿ, ಕಾಲೇಜು

ಅಥವಾ ಸಂಸ್ಥೆಯಲ್ಲಿ, ವಲಯ–ಎ ಯಲ್ಲಿನ ಒಂದೇ ಸ್ಥಳದಲ್ಲಿ ನಿಯಮಿಸಲಾದ ವರ್ಷಗಳ ಸಂಖ್ಯೆಗಿಂತ ಹೆಚ್ಚು ಕಾಲ ನಿರಂತರವಾಗಿ ಸೇವೆ ಸಲ್ಲಿಸಿರುವ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ವಲಯ–ಸಿ ಗೆ ವರ್ಗಾವಣೆ ಮಾಡತಕ್ಕದ್ದು:

ಪರಂತು, ವಯೋನಿವೃತ್ತಿಗೆ ಎರಡು ವರ್ಷಗಳಿಗಿಂತ ಕಡಿಮೆ ಸೇವಾವಧಿ ಉಳಿದಿರುವ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು, ಆತನ ಕೋರಿಕೆಯ ಮೇಲೆ ಹೊರತು ವಲಯ–ಎ ಯಿಂದ ಹೊರಗೆ ವರ್ಗಾವಣೆ ಮಾಡತಕ್ಕದ್ದಲ್ಲ.

**6. ವರ್ಗಾವಣೆಯ ಮೇಲೆ ನಿರ್ಬಂಧ.–** ಜ್ಯೇಷ್ಠತೆಯ ಘಟಕದಲ್ಲಿನ ಅಂಥ ವರ್ಗಾವಣೆಗಳ ಒಟ್ಟು ಸಂಖ್ಯೆಯು ಆ ಜ್ಯೇಷ್ಠತೆಯ ಘಟಕದಲ್ಲಿನ ಆಯಾ ವೃಂದಕ್ಕೆ ಮಂಜೂರಾಗಿರುವ ಶೇಕಡಾ ಹತ್ತರಷ್ಟನ್ನು ಮೀರತಕ್ಕದ್ದಲ್ಲ:

ಪರಂತು, ಮೇಲೆ ಹೇಳಿರುವಂಥ ವರ್ಗಾವಣೆಯ ಒಟ್ಟು ಸಂಖ್ಯೆಯ ಶೇಕಡ ಹತ್ತರ ಪೈಕಿ, ವಿಶೇಷ ಪ್ರವರ್ಗದ ಅಡಿಯಲ್ಲಿ ಮಾಡಬೇಕಾದ ವರ್ಗಾವಣೆಗಳ ಶೇಕಡ ಪ್ರಮಾಣವನ್ನು ನಿಯಮಿಸಬಹುದು.

**7. ಹುದ್ದೆಗಳನ್ನು ಸ್ಥಳಾಂತರಗೊಳಿಸುವುದು.–** ತಾಂತ್ರಿಕ ಶಿಕ್ಷಣ ಇಲಾಖೆಯ ಯಾವುದೇ ಕಾಲೇಜು ಅಥವಾ ಸಂಸ್ಥೆಯಲ್ಲಿ, ಯಾವುದೇ ವಿಷಯದಲ್ಲಿ, ಬೋಧಕ ಸಿಬ್ಬಂದಿಗೆ ಸಾಕಷ್ಟು ಕಾರ್ಯಭಾರ ಇಲ್ಲದಿದ್ದರೆ, ಸಕ್ಷಮ ಪ್ರಾಧಿಕಾರವು ಹೆಚ್ಚುವರಿಯೆಂದು ನಿರ್ಧರಿಸಬಹುದಾದಷ್ಟು ಸಂಖ್ಯೆಯ ಹುದ್ದೆಗಳನ್ನು ಸಾಕಷ್ಟು ಕಾರ್ಯಭಾರವಿರುವಂಥ ಅದೇ ವಲಯದೊಳಗಿನ ಯಾವುದೇ ಇತರ ಕಾಲೇಜು ಅಥವಾ ಸಂಸ್ಥೆಗೆ ಸ್ಥಳಾಂತರಿಸಬಹುದು:

ಪರಂತು, ಅದೇ ವಲಯದಲ್ಲಿ ಆ ವಿಷಯ ಅಥವಾ ವೃಂದದಲ್ಲಿ ಸಾಕಷ್ಟು ಕಾರ್ಯಭಾರ ಇರುವಂಥ ಕಚೇರಿ ಅಥವಾ ಕಾಲೇಜು ಅಥವಾ ಸಂಸ್ಥೆಯು ಲಭ್ಯವಿಲ್ಲದಿದ್ದರೆ, ಆ ವಿಷಯದ ಅಷ್ಟು ಸಂಖ್ಯೆಯ ಹುದ್ದೆಗಳನ್ನು ವಲಯ–ಸಿ ಇಂದ ವಲಯ–ಬಿ ಗೆ ಮತ್ತು ವಲಯ – ಬಿ ಇಂದ ವಲಯ–ಎ ಗೆ ಸ್ಥಳಾಂತರಿಸಬಹುದು.

**8. ಸ್ಥಳಾಂತರವಾದ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿ ಅಥವಾ ಬೋಧಕೇತರ ಸಿಬ್ಬಂದಿಯ ವರ್ಗಾವಣೆ.–** 7ನೇ ಪ್ರಕರಣದ ಅನ್ವಯ ಸ್ಥಳಾಂತರವಾದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು 3, 4 ಮತ್ತು 5ನೇ ಪ್ರಕರಣದ ಅನ್ವಯ ಅದೇ ವಲಯದಲ್ಲಿ ವರ್ಗಾವಣೆ ಮಾಡತಕ್ಕದ್ದು.

**9. ಪದಾವಧಿಗೆ ಅಪವಾದಗಳು.–** ವರ್ಗಾವಣೆಯ ಸಂದರ್ಭದಲ್ಲಿ, ಕಾಲಕಾಲಕ್ಕೆ ನಿಯಮಿಸಬಹುದಾದ ಸ್ಥಳ ಅಥವಾ ವಲಯದಲ್ಲಿ ಇರಬೇಕಾದ ಕನಿಷ್ಠ ಅವಧಿಯನ್ನು ಈ ಮುಂದಿನ ಸಂದರ್ಭಗಳಲ್ಲಿ ಸಡಿಲಗೊಳಿಸತಕ್ಕದ್ದು, ಎಂದರೆ:–

(i) ಗಂಡ ಹೆಂಡತಿಯರಿಬ್ಬರೂ ಸರ್ಕಾರಿ ನೌಕರರಾಗಿದ್ದು ಅವರಿಬ್ಬರಲ್ಲಿ ಒಬ್ಬರು ಬೇರೆ ವಲಯದಲ್ಲಿ ಕರ್ತವ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಅವರಲ್ಲಿ ಇನ್ನೊಬ್ಬರನ್ನು ಅದೇ ಸ್ಥಳಕ್ಕೆ ಅಥವಾ ಆತನು ಅದೇ ವಲಯಲ್ಲಿದ್ದರೆ, ಸ್ಪಷ್ಟ ಖಾಲಿ ಸ್ಥಾನದ ಲಭ್ಯತೆಗೊಳಪಟ್ಟು ಹತ್ತಿರದ ಸ್ಥಳಕ್ಕೆ ವರ್ಗಾಯಿಸಬಹುದು;

(ii) ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಿಧವೆಯಾಗಿದ್ದಲ್ಲಿ;

(iii) ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ದೈಹಿಕವಾಗಿ ಅಸಮರ್ಥರಾಗಿದ್ದಲ್ಲಿ;

(iv) ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಗೆ ಪತಿ/ಪತ್ನಿ ಅಥವಾ ಮಕ್ಕಳು ಇದ್ದು, ಕೆಲಸ ಮಾಡುತ್ತಿರುವ ಸ್ಥಳದಲ್ಲಿ ವೈದ್ಯಕೀಯ ಚಿಕಿತ್ಸೆಯು ಲಭ್ಯವಿಲ್ಲದ ತೀವ್ರ ಸ್ವರೂಪದ ಕಾಯಿಲೆಯಿಂದ ಬಳಲುತ್ತಿದ್ದರೆ, ಆ ಕಾಯಿಲೆಗೆ ಅಗತ್ಯವಾದ ವೈದ್ಯಕೀಯ ಚಿಕಿತ್ಸೆ ಕೊಡಿಸಲು ಸಾಧ್ಯವಾಗುವ ಹಾಗೆ, ಅಂಥ ಚಿಕಿತ್ಸೆ ಲಭ್ಯವಿರುವಂಥ ಒಂದು ಸ್ಥಳಕ್ಕೆ ಆತನನ್ನು ವರ್ಗಾವಣೆ ಮಾಡುವುದು ಅಗತ್ಯವಾಗಿದ್ದರೆ,

ಪರಂತು, ಸಂಬಂಧಪಟ್ಟ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು, ಕಾಯಿಲೆಯ ಸ್ವರೂಪವನ್ನು ನಿರ್ದಿಷ್ಟಪಡಿಸಿ, ಆತನು ಕಾರ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿ ಅಗತ್ಯ ಚಿಕಿತ್ಸೆಯು ಲಭ್ಯವಿಲ್ಲವೆಂಬ ಸಂಗತಿಯನ್ನು ತಿಳಿಸಿ, ಅಗತ್ಯ ಚಿಕಿತ್ಸೆಯು ಯಾವ ಸ್ಥಳದಲ್ಲಿ ದೊರೆಯುತ್ತದೆ ಎಂಬುದನ್ನು ನಿರ್ದಿಷ್ಟಪಡಿಸಿ ಮತ್ತು ಅಗತ್ಯವಿರುವ ವೈದ್ಯಕೀಯ ಚಿಕಿತ್ಸೆ ಕೊಡಿಸಲು ಅಂಥ ಒಂದು ಸ್ಥಳಕ್ಕೆ ಆತನನ್ನು ವರ್ಗಾವಣೆ ಮಾಡುವುದು ಅವಶ್ಯವೆಂದು ಪ್ರಮಾಣೀಕರಿಸಿ ಜಿಲ್ಲಾ ವೈದ್ಯಕೀಯ ಮಂಡಳಿಯು ನೀಡಿರುವ ಒಂದು ಪ್ರಮಾಣಪತ್ರವನ್ನು ಹಾಜರು ಪಡಿಸಿದ ಹೊರತು, ಯಾವುದೇ ವರ್ಗಾವಣೆಯನ್ನು ಪರಿಗಣಿಸತಕ್ಕದ್ದಲ್ಲ.

**10. ನಿಯೋಜನೆಯ ನಿಯಂತ್ರಣ.–** ತಾಂತ್ರಿಕ ಶಿಕ್ಷಣ ಇಲಾಖೆಯ ಒಂದು ಕಚೇರಿ, ಕಾಲೇಜು ಅಥವಾ ಸಂಸ್ಥೆಯಿಂದ ಮತ್ತೊಂದು ತಾಂತ್ರಿಕ ಶಿಕ್ಷಣ ಇಲಾಖೆಯ ಒಂದು ಕಚೇರಿ, ಕಾಲೇಜು ಅಥವಾ ಸಂಸ್ಥೆಗೆ ನಿಯೋಜನೆಯು ಸಂಪೂರ್ಣವಾಗಿ ಅವಶ್ಯವಾಗುವ ಅನಿವಾರ್ಯ ಸನ್ನಿವೇಶಗಳಿದ್ದಲ್ಲಿ, ಆಗ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ಅಂಥ ನಿಯೋಜನೆಯನ್ನು ಅದೇ ವಲಯದೊಳಗೆ ಮಾಡತಕ್ಕದ್ದು.

**11. ದಂಡಗಳು.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಉಲ್ಲಂಘಿಸಿ ಯಾವುದೇ ಸಕ್ಷಮ ಪ್ರಾಧಿಕಾರ ಅಥವಾ ಯಾವೊಬ್ಬ ಅಧಿಕಾರಿಯು ಸ್ಥಳ ನಿಯುಕ್ತಿ ಅಥವಾ ನೇಮಕಾತಿ ಅಥವಾ ವರ್ಗಾವಣೆಯ ಆದೇಶವನ್ನು ಮಾಡಿದ್ದರೆ ಸಂದರ್ಭಾನುಸಾರ ಅಂಥ ಸಕ್ಷಮ ಪ್ರಾಧಿಕಾರ ಅಥವಾ ಅಧಿಕಾರಿ ಸಿವಿಲ್ ಸೇವಕರಿಗೆ ಅನ್ವಯಿಸುವಂಥ ಶಿಸ್ತು ನಿಯಮಾವಳಿ ಅಡಿಯಲ್ಲಿ ಶಿಸ್ತಿನ ಕ್ರಮಕ್ಕೆ ಗುರಿಯಾಗತಕ್ಕದ್ದು.

**12. ಅಪರಾಧಗಳ ಸಂಜ್ಞೇಯತೆ.–** ಯಾವ ನ್ಯಾಯಾಲಯವೂ, ಸರ್ಕಾರಿ ರಾಜ್ಯಪತ್ರದಲ್ಲಿ ಈ ಬಗ್ಗೆ ಪ್ರಕಟಿಸಲಾದ ಅಧಿಸೂಚನೆಯ ಮೂಲಕ ಸರ್ಕಾರದಿಂದ ಅಧಿಕಾರಪಡೆದ ಒಬ್ಬ ಅಧಿಕಾರಿಯು ಲಿಖಿತ ದೂರು ಸಲ್ಲಿಸಿದ ಮೇಲೆ ಹೊರತು, ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧವನ್ನು ಸಂಜ್ಞಾನಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

**13. ಇತರ ಕಾನೂನುಗಳ ಮೇಲೆ ಅಧಿನಿಯಮದ ಅಧ್ಯಾರೋಹಿ ಪರಿಣಾಮ.–** ಈ ಅಧಿನಿಯಮದ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರೆ ಯಾವುದೇ ಕಾನೂನಿನಲ್ಲಿ ಅವುಗಳಿಗೆ ಅಸಂಗತವಾಗಿ ಏನೇ ಇದ್ದರೂ ಪರಿಣಾಮಕಾರಿಯಾಗಿರತಕ್ಕದ್ದು.

**14. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ಸರ್ಕಾರವು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು.

**15. ಅನುಸೂಚಿಯನ್ನು ತಿದ್ದುಪಡಿ ಮಾಡಲು ಅಧಿಕಾರ.–** ಸರ್ಕಾರವು, ಅಧಿಸೂಚನೆಯ ಮೂಲಕ, ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ನಮೂದನ್ನು ಸೇರಿಸಬಹುದು, ಮಾರ್ಪಡಿಸಬಹುದು ಅಥವಾ ತೆಗೆದುಹಾಕಬಹುದು.

**16. ಸದ್ಭಾವನೆಯಲ್ಲಿ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಲಾದ ಯಾವುದೇ ಕ್ರಮದ ಬಗ್ಗೆ ಸರ್ಕಾರದ ಯಾವೊಬ್ಬ ಅಧಿಕಾರಿಯ ವಿರುದ್ಧ ಯಾವುದೇ ದಾವೆ, ಅಭಿಯೋಜನೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಕೈಗೊಳ್ಳಲು ಅವಕಾಶವಿರತಕ್ಕದ್ದಲ್ಲ.

**17. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಅಧಿಸೂಚನೆಯ ಮೂಲಕ ಮತ್ತು ಪೂರ್ವಪ್ರಕಟಣೆ ನೀಡಿದ ತರುವಾಯ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಯಾವುದೇ ನಿಯಮವನ್ನು ಪೂರ್ವಾನ್ವಯವಾಗಿ ರಚಿಸಬಹುದು ಮತ್ತು ಅಂಥ ನಿಯಮವನ್ನು ರಚಿಸಿದ ತರುವಾಯ ನಿಯಮವನ್ನು ರಚಿಸಿದ ಕಾರಣಗಳನ್ನು ನಿರ್ದಿಷ್ಟವಾಗಿ ತಿಳಿಸುವ ಹೇಳಿಕೆಯೊಂದನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು ಮತ್ತು (3)ನೇ ಉಪ ಪ್ರಕರಣದ ಅಡಿ ಯಲ್ಲಿ ಮಾಡಿದ ಯಾವುದೇ ಮಾರ್ಪಾಟಿಗೊಳಪಟ್ಟು, ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಪ್ರತಿಯೊಂದು ನಿಯಮವು, ಈ ಅಧಿನಿಯಮದ ಅಡಿಯಲ್ಲಿ ಅದು ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು ಅಥವಾ ಹೊರಡಿಸಿದ ಅಧಿಸೂಚನೆಯನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯ ಸದನಗಳು ನಿಯಮದಲ್ಲಿ ಅಥವಾ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟುಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ಅಥವಾ ಅಧಿಸೂಚನೆಯನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಅಥವಾ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಥವಾ ಅಧಿಸೂಚನೆಯ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯಕ್ಕೂ ಬಾಧಕವಾಗತಕ್ಕದ್ದಲ್ಲ.

**18. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ಹಾಗೂ ಯಾವ ವಿಷಯಗಳ ಮುಂದುವರಿಕೆಗಾಗಿ ಈ ಅಧಿನಿಯಮವನ್ನು ಜಾರಿಗೆ ತರಲಾಗಿದೆಯೋ ಅಥವಾ ಉಪಬಂಧ ಕಲ್ಪಿಸಲಾಗಿದೆಯೋ ಅದಕ್ಕೆ ಸಂಬಂಧಪಟ್ಟ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ರಚಿಸಿದ ಅಥವಾ ಹೊರಡಿಸಿದ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕಗಳು ಅವು ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಯಾವುದೇ ಕಾರ್ಯದಿಂದ ಅಥವಾ ತೆಗೆದುಕೊಂಡ ಯಾವುದೇ ಕ್ರಮದಿಂದ ಅಥವಾ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕದಿಂದ ರದ್ದಾದ ಹೊರತು ಮತ್ತು ರದ್ದಾಗುವವರೆಗೆ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ, ಅವುಗಳನ್ನು ಈ ಅಧಿನಿಯಮದ ಸಂವಾದಿ ಉಪಬಂಧಗಳ ಅಡಿಯಲ್ಲಿ ರಚಿಸಿದ್ದರೆ ಅಥವಾ ಹೊರಡಿಸಿದ್ದರೆ ಅಥವಾ ನೇಮಿಸಿದ್ದರೆ, ಹೇಗೋ ಹಾಗೆ ಜಾರಿಯಲ್ಲಿ ಮುಂದುವರಿಯತಕ್ಕದ್ದು ಮತ್ತು ಪರಿಣಾಮಕಾರಿಯಾಗಿರತಕ್ಕದ್ದು.

**ಅನುಸೂಚಿ**

(2 (ಎಫ್), (ಜಿ) ಮತ್ತು (ಎಚ್) ಪ್ರಕರಣ ಮತ್ತು 12ನೇ ಪ್ರಕರಣ ನೋಡಿ)

| ಕ್ರಮ ಸಂಖ್ಯೆ | ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು, ಸರ್ಕಾರಿ ಪಾಲಿಟೆಕ್ನಿಕ್‌ಗಳು, ಸರ್ಕಾರಿ ಪಾಲಿಟೆಕ್ನಿಕ್‌ಗಳು, ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆ, ತಾಂತ್ರಿಕ ಶಿಕ್ಷಣದ ನಿರ್ದೇಶನಾಲಯಕ್ಕೆ ಸಂಬಂಧಿತ ಮತ್ತು ಕಚೇರಿಯಲ್ಲಿ ಪ್ರಾಂಶುಪಾಲ, ಬೋಧಕ ಬೋಧಕೇತರ ಸಿಬ್ಬಂದಿ |
|---|---|
| **(1)** | **(2)** |
| 1. | ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು<br>1. ಪ್ರಾಂಶುಪಾಲ<br>2. ಪ್ರಾಧ್ಯಾಪಕರು<br>3. ಸಹ ಪ್ರಾಧ್ಯಾಪಕರು<br>4. ಸಹ ಪ್ರಾಧ್ಯಾಪಕರು<br>5. ಗ್ರಂಥಪಾಲಕರು<br>6. ದೈಹಿಕ ಶಿಕ್ಷಣ ಮತ್ತು ಕ್ರೀಡೆಗಳ ಸಹಾಯಕ ನಿರ್ದೇಶಕರು<br>7. ನಿಯೋಜನೆ ಅಧಿಕಾರಿ |

| ಕ್ರಮ ಸಂಖ್ಯೆ | ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು, ಸರ್ಕಾರಿ ಪಾಲಿಟೆಕ್ನಿಕ್‌ಗಳು, ಸರ್ಕಾರಿ ಪಾಲಿಟೆಕ್ನಿಕ್‌ಗಳು, ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆ, ತಾಂತ್ರಿಕ ಶಿಕ್ಷಣದ ನಿರ್ದೇಶನಾಲಯಕ್ಕೆ ಸಂಬಂಧಿತ ಮತ್ತು ಕಚೇರಿಯಲ್ಲಿ ಪ್ರಾಂಶುಪಾಲ, ಬೋಧಕ ಬೋಧಕೇತರ ಸಿಬ್ಬಂದಿ |
|---|---|
| (1) | (2) |
| 2. | ಸರ್ಕಾರಿ ಪಾಲಿಟೆಕ್ನಿಕ್‌ಗಳು<br>1. ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದಲ್ಲಿ ಪ್ರಾಂಶುಪಾಲ ಗ್ರೇಡ್–II ಅಥವಾ ಉಪನಿರ್ದೇಶಕರ ಸಮಾನಾಂತರ ಹುದ್ದೆ.<br>2. ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದಲ್ಲಿ ಪ್ರಾಂಶುಪಾಲ ಗ್ರೇಡ್–I ಸಹಾಯಕ ನಿರ್ದೇಶಕರು/ವಿಷಯ ಪರಿಶೀಲಕರು.<br>3. ಇಲಾಖಾ ಮುಖ್ಯಸ್ಥರು<br>4. ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದಲ್ಲಿ ಉಪನ್ಯಾಸಕರು ಅಥವಾ ಹಿರಿಯ ತಾಂತ್ರಿಕ ಸಹಾಯಕರು/ತಾಂತ್ರಿಕ ಸಹಾಯಕರು/ ಸಂಶೋಧನಾಧಿಕಾರಿ/ ಅಭಿವೃದ್ಧಿ ಅಧಿಕಾರಿ/ಪ್ರೊಗ್ರಾಮರ್/ಸಿಸ್ಟಮ್ ಅನಾಲಿಸ್ಟ್ ಹುದ್ದೆಯ ಸಮಾನಾಂತರ ಹುದ್ದೆ.<br>5. ಸಹಾಯಕ ಉಪನ್ಯಾಸಕರು |
| 3. | ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆ<br>1. ಪ್ರಾಂಶುಪಾಲ<br>2. ಉಪನ್ಯಾಸಕರು<br>3. ಸಹಾಯಕ ಉಪನ್ಯಾಸಕರು<br>ಆಡಳಿತಾತ್ಮಕ ಮತ್ತು ತಾಂತ್ರಿಕ ಬೆಂಬಲ ಸಿಬ್ಬಂದಿ |
| 4. | ಸಹಾಯಕ ಆಡಳಿತಾತ್ಮಕ ಅಧಿಕಾರಿ, ನಿರ್ದೇಶಕರು |
| 5. | ರಿಜಿಸ್ಟ್ರಾರ್/ಸಾರ್ವಜನಿಕ ಸಂಪರ್ಕ ಅಧಿಕಾರಿ |
| 6. | ಸಿಸ್ಟಮ್ ಅನಾಲಿಸ್ಟ್ |
| 7. | ಜೂನಿಯರ್ ಪ್ರೊಗ್ರಾಮರ್ |
| 8. | ಸೂಪರಿಂಟೆಂಡೆಂಟ್ |
| 9. | ಗ್ರಂಥಪಾಲಕರು |
| 10. | ಪ್ರಥಮ ದರ್ಜೆ ಸಹಾಯಕರು |
| 11. | ಶೀಘ್ರಲಿಪಿಗಾರರು |
| 12. | ದ್ವಿತೀಯ ದರ್ಜೆ ಸಹಾಯಕರು |
| 13. | ಹಿರಿಯ ಡಾಟಾ ಎಂಟ್ರಿ ಆಪರೇಟರ್ |
| 14. | ಡಾಟಾ ಎಂಟ್ರಿ ಆಪರೇಟರ್ |
| 15. | ಬೆರಳಚ್ಚುಗಾರರು |
| 16. | ಕಾರ್ಯಾಗಾರ ಸೂಪರಿಂಟೆಂಡೆಂಟ್ |
| 17. | ಫೋರ್‌ಮನ್ |
| 18. | ಫೋರ್‌ಮನ್/ ಕಂಪ್ಯೂಟರ್ ಇಂಜಿನಿಯರಿಂಗ್‌ನಲ್ಲಿ ಪ್ರೊಗ್ರಾಮರ್ |
| 19. | ಶಿಕ್ಷಕರು |
| 20. | ಸಹಾಯಕ ಗ್ರಂಥಪಾಲಕ |
| 21. | ದೈಹಿಕ ಸಾಂಸ್ಕೃತಿಕ ಶಿಕ್ಷಕರು |
| 22. | ಸಹಾಯಕ ಗ್ರಂಥಪಾಲಕರು |
| 23. | ಮೆಕ್ಯಾನಿಕ್ |
| 24. | ಆಟೋ ಡ್ರೈವರ್ ಮೆಕ್ಯಾನಿಕ್ |
| 25. | ಕ್ಯಾಮರಾ ಮ್ಯಾನ್ |
| 26. | ಸಹಾಯಕ ಕ್ಯಾಮರಾ ಮ್ಯಾನ್ |
| 27. | ನಿರ್ಮಾಣ ಸಹಾಯಕರು |
| 28. | ಗ್ರಾಫಿಕ್ಸ್ ಆರ್ಟಿಸ್ಟ್ |

| ಕ್ರಮ ಸಂಖ್ಯೆ | ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು, ಸರ್ಕಾರಿ ಪಾಲಿಟೆಕ್ನಿಕ್‌ಗಳು, ಸರ್ಕಾರಿ ಪಾಲಿಟೆಕ್ನಿಕ್‌ಗಳು, ಸರ್ಕಾರಿ ಜೂನಿಯರ್ ತಾಂತ್ರಿಕ ಶಾಲೆ, ತಾಂತ್ರಿಕ ಶಿಕ್ಷಣದ ನಿರ್ದೇಶನಾಲಯಕ್ಕೆ ಸಂಬಂಧಿತ ಮತ್ತು ಕಚೇರಿಯಲ್ಲಿ ಪ್ರಾಂಶುಪಾಲ, ಬೋಧಕ ಬೋಧಕೇತರ ಸಿಬ್ಬಂದಿ |
|---|---|
| (1) | (2) |
| 29. | ಪ್ರೊಜೆಕ್ಷನಿಸ್ಟ್ |
| 30. | ಶಬ್ಧ ದಾಖಲೆಗಾರರು |
| 31. | ಸಹಾಯಕ ದಾಖಲೆಗಾರರು |
| 32. | ವಾಹನ ಚಾಲಕರು |
| 33. | ಗ್ರೂಪ್ –ಡಿ<br>(i) ಆಫೀಸ್ ಅಟೆಂಡರ್<br>(ii) ಹೆಲ್ಪರ್<br>(iii) ಮುಖ್ಯ ಬಾಣಸಿಗ<br>(iv) ಪ್ಯೂನ್<br>(v) ವಾಚ್‌ಮನ್<br>(vi) ಸ್ವೀಪರ್<br>(vii) ಸಹಾಯಕ ಬಾಣಸಿಗ<br>(viii) ಕ್ಲೀನರ್ (ಹಾಸ್ಟೆಲ್) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ


# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೬, ೨೦೧೩ (ಮಾಘ ೧೭, ಶಕ ವರ್ಷ ೧೯೩೪) | ನಂ. ೧೫೨ |
|---|---|---|
| Part – III | Bangalore, Wednesday, February 6, 2013 (Magha 17, Shaka Varsha 1934) | No. 152 |


## ಜಿಲ್ಲಾಧಿಕಾರಿಯವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು.

### ಆದೇಶ

**ನಂ. ಚು(2)ವಿವ/55/2012–13, ದಿನಾಂಕ: 05.02.2013**

2013ನೇ ಸಾಲಿನಲ್ಲಿ ನಡೆಯಲಿರುವ ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆಗೆ ಸಂಬಂಧಿಸಿದಂತೆ, ಕರ್ನಾಟಕ ಮುನಿಸಿಪಾಲಿಟಿಗಳ (ಕೌನ್ಸಿಲರುಗಳ ಚುನಾವಣೆ) ನಿಯಮಗಳು 1977ರ ನಿಯಮ 4ರಂತೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆರ್.ಕೆ.ರಾಜು, ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು, ಆದ ನಾನು ಕೆಳಗಿರುವ ಕೋಷ್ಟಕದ ಅಂಕಣ (2)ರ ನಗರಸಭೆಗಳ/ಪುರಸಭೆಗಳ ಮತ್ತು ಪಟ್ಟಣ ಪಂಚಾಯತಿಗಳ ಅಂಕಣ (3)ರಲ್ಲಿ ನಮೂದಿಸಿರುವ ವಾರ್ಡ್‌ಗಳಿಗೆ ಚುನಾವಣೆ ನಡೆಸಲು ಅಂಕಣ (4) ಮತ್ತು (5)ರಲ್ಲಿ ನಮೂದಿಸಿರುವ ಅಧಿಕಾರಿಗಳನ್ನು ಅನುಕ್ರಮವಾಗಿ ಚುನಾವಣಾಧಿಕಾರಿ ಮತ್ತು ಸಹಾಯಕ ಚುನಾವಣಾಧಿಕಾರಿಗಳನ್ನಾಗಿ ಗೊತ್ತುಪಡಿಸಿದ್ದೇನೆ.

**ಕೋಷ್ಟಕ**

| ಕ್ರ. ಸಂ | ನಗರ ಸ್ಥಳೀಯ ಸಂಸ್ಥೆಗಳ ಹೆಸರು | ವಾರ್ಡ್‌ಗಳ ಸಂಖ್ಯೆ | ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ | ಸಹಾಯಕ ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ |
|---|---|---|---|---|
| 1 | 2 | 3 | 4 | 5 |
| 1. | ನಗರಸಭೆ ತುಮಕೂರು | 1 ರಿಂದ 7 | ಶ್ರೀ ಮುರುಳೀಧರ,<br>ಪರಿಸರ ಅಧಿಕಾರಿಗಳು,<br>ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ,<br>ತುಮಕೂರು–9945497095 | ಶ್ರೀ ನರೇಂದ್ರ ಬಾಬು,<br>ಸಹಾಯಕ ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರ್‌ಗಳ ಇಲಾಖೆ,<br>ತುಮಕೂರು–9663374033 |

| ಕ್ರ. ಸಂ | ನಗರ ಸ್ಥಳೀಯ ಸಂಸ್ಥೆಗಳ ಹೆಸರು | ವಾರ್ಡ್‌ಗಳ ಸಂಖ್ಯೆ | ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ | ಸಹಾಯಕ ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ |
|---|---|---|---|---|
| 1 | 2 | 3 | 4 | 5 |
| | | 8 ರಿಂದ 14 | ಶ್ರೀ ಮುಕುಂದಕೃಷ್ಣೇಗೌಡ,<br>ಜಂಟಿ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,<br>ತುಮಕೂರು–9448413757. | ಶ್ರೀ ನಾಗೇಶ್,<br>ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮಿನಿ ವಿಧಾನ ಸೌಧ, ತುಮಕೂರು.<br>–9945737478. |
| | | 15 ರಿಂದ 21 | ಶ್ರೀ ಜಿ.ನರಸಿಂಹಪ್ಪ<br>ಜಿಲ್ಲಾ ಸಂಖ್ಯಿಕ ಅಧಿಕಾರಿ,<br>ತುಮಕೂರು–9448922559. | ಶ್ರೀ ಸಿ.ಇ. ನಾಗರಾಜ್,<br>ರೇಷ್ಮೆ ವಿಸ್ತರಣಾಧಿಕಾರಿ,<br>ರೇಷ್ಮೆ ಇಲಾಖೆ, ತುಮಕೂರು. 9740585289 |
| | | 22 ರಿಂದ 28 | ಶ್ರೀ ಗಂಗಯ್ಯ,<br>ಉಪನಿರ್ದೇಶಕರು, ಜವಳಿ ಇಲಾಖೆ,<br>ತುಮಕೂರು.–9448642671. | ಶ್ರೀ ಎಸ್. ರವಿಕುಮಾರ್,<br>ಹಿರಿಯ ಉಪನ್ಯಾಸಕರು,<br>DIET, ತುಮಕೂರು. |
| | | 29 ರಿಂದ 35 | ಶ್ರೀ ರಾಮಯ್ಯ,<br>ಉಪನಿರ್ದೇಶಕರು,<br>ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ವೃತ್ತ, ತುಮಕೂರು–9448127715. | ಶ್ರೀ ಬಾಲಕೃಷ್ಣಪ್ಪ.ವೈ.ಕೆ<br>ಸಹಾಯಕ ನಿರ್ದೇಶಕರು,<br>ರೇಷ್ಮೆ ಇಲಾಖೆ,<br>ತುಮಕೂರು–9448892970. |
| 2. | ನಗರಸಭೆ ತಿಪಟೂರು | 1 ರಿಂದ 8 | ಶ್ರೀ ಚನ್ನಿಗರಾಯಪ್ಪ,<br>ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ,<br>ತಿಪಟೂರು–9448659841. | ಶ್ರೀ ಮಂಜು ಹೆಚ್.ಎಸ್.,<br>ಸಹಾಯಕ ತೋಟಗಾರಿಕೆ ಅಧಿಕಾರಿ,<br>ತಿಪಟೂರು ತಾಲ್ಲೂಕು,<br>ತಿಪಟೂರು. –9964185162 |
| | | 9 ರಿಂದ 16 | ಶ್ರೀ ಕುಮಾರಸ್ವಾಮಿ,<br>ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ಇಲಾಖೆ,<br>ತಿಪಟೂರು–9900590596. | ಶ್ರೀ ಚನ್ನಕೇಶವಮೂರ್ತಿ.ಹೆಚ್,<br>ಕೃಷಿ ಅಧಿಕಾರಿ, ರೈತ ಸಂಪರ್ಕ ಕೇಂದ್ರ,<br>ನೊಣವಿನಕೆರೆ, ತಿಪಟೂರು ತಾಲ್ಲೂಕು.–9591987494. |
| | | 17 ರಿಂದ 24 | ಶ್ರೀ ಉಮೇಶ್,<br>ಸಹಾಯಕ ನಿರ್ದೇಶಕರು<br>ಕೃಷಿ ಇಲಾಖೆ,<br>ತಿಪಟೂರು.–9591987417. | ಶ್ರೀ ವಿರೂಪಾಕ್ಷ,<br>ಅಭಿಯಂತರರು, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಪಂ.ರಾಜ್ ಇಂಜಿನಿಯರಿಂಗ್ ಉಪವಿಭಾಗ,<br>ತಿಪಟೂರು–9480877553. |
| | | 25 ರಿಂದ 31 | ಶ್ರೀ ನ್ಯಾಮಗೌಡ,<br>ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ತಿಪಟೂರು–9844931099. | ಶ್ರೀ ಮಹಾಂತೇಶ್,<br>ಸಹಾಯಕ ನಿರ್ದೇಶಕರು, ತಾಲ್ಲೂಕು ಪಂಚಾಯತಿ ತಿಪಟೂರು ತಾಲ್ಲೂಕು–9480877141. |
| 3. | ನಗರಸಭೆ ಶಿರಾ | 1 ರಿಂದ 8 | ಶ್ರೀ ರಾಜಕುಮಾರ್.ಎಸ್,<br>ಕ್ಷೇತ್ರ ಶಿಕ್ಷಣಾಧಿಕಾರಿ,<br>ಶಿರಾ ತಾಲ್ಲೂಕು, ಶಿರಾ–9480695358 | ಶ್ರೀ ಅಶ್ವತ್ಥನಾರಾಯಣ ರಾವ್,<br>ಉಪತಹಶೀಲ್ದಾರ್, ನಾಡಕಛೇರಿ, ಕಳ್ಳಂಬೆಳ್ಳ ಹೋಬಳಿ, ಶಿರಾ ತಾ॥.–9731850805. |
| | | 9 ರಿಂದ 16 | ಶ್ರೀ ವೀರಣ್ಣ,<br>ಸಹಾಯಕ ಕೃಷಿ ನಿರ್ದೇಶಕರು,<br>ಶಿರಾ ತಾಲ್ಲೂಕು–9844901370 | ಶ್ರೀ ಬಸವರಾಜು,<br>ಉಪತಹಶೀಲ್ದಾರ್, ನಾಡಕಛೇರಿ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು. –9620397696. |
| | | 17 ರಿಂದ 24 | ಶ್ರೀ ಜಗನ್ನಾಥ್, ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪವಿಭಾಗ, ಶಿರಾ–9980777123. | ಶ್ರೀ ರಂಗನಾಥಪ್ಪ,<br>ಆಹಾರ ಶಿರಸ್ತೇದಾರ್,<br>ತಾಲ್ಲೂಕು ಕಛೇರಿ, ಶಿರಾ–9731832196. |

| ಕ್ರ. ಸಂ | ನಗರ ಸ್ಥಳೀಯ ಸಂಸ್ಥೆಗಳ ಹೆಸರು | ವಾರ್ಡ್‌ಗಳ ಸಂಖ್ಯೆ | ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ | ಸಹಾಯಕ ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ |
|---|---|---|---|---|
| | | 25 ರಿಂದ 31 | ಶ್ರೀ ಓಂಕಾರಪ್ಪ,<br>ತಾಲ್ಲೂಕು ಸಮಾಜ ಕಲ್ಯಾಣಧಿಕಾರಿ,<br>ಶಿರಾ ತಾಲ್ಲೂಕು, ಶಿರಾ. | ಶ್ರೀ ಕೆ.ಪುರಂದರ,<br>ಉಪತಹಶೀಲ್ದಾರ್, ನಾಡಕಛೇರಿ, ಹುಲಿಕುಂಟೆ ಹೋಬಳಿ,<br>ಶಿರಾ ತಾಲ್ಲೂಕು–9742444578. |
| 4. | ಪುರಸಭೆ<br>ಕುಣಿಗಲ್ | 1 ರಿಂದ 8 | ಶ್ರೀ ಎಸ್.ಪಿ. ನಾರಾಯಣಸ್ವಾಮಿ,<br>ಸಹಾಯಕ ಕೃಷಿ ನಿರ್ದೇಶಕರು,<br>ಕುಣಿಗಲ್–9448101070. | ಶ್ರೀ ರಾಮಚಂದ್ರ.ಎಚ್.ಎನ್.<br>ಹಕ್ಕುದಾಖಲೆ ಶಿರಸ್ತೆದಾರ್, ತಾಲ್ಲೂಕು ಕಛೇರಿ,<br>ಕುಣಿಗಲ್–9448581911 |
| | | 9 ರಿಂದ 16 | ಶ್ರೀ ಲೋಕೇಶ್,<br>ಕ್ಷೇತ್ರ ಶಿಕ್ಷಣಾಧಿಕಾರಿ,<br>ಕುಣಿಗಲ್,<br>ಕುಣಿಗಲ್ ತಾಲ್ಲೂಕು–9480695355. | ಶ್ರೀ ಚಂದ್ರಮೌಳಿ, ಕೆ.ಎನ್<br>ಉಪತಹಶೀಲ್ದಾರ್, ನಾಡಕಛೇರಿ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು–9483081272. |
| | | 17 ರಿಂದ 23 | ಶ್ರೀ ರವೀಂದ್ರ ಎನ್.ಜಿ<br>ಶಿಶು ಅಭಿವೃದ್ಧಿ ಯೋಜನಾಧಿಕಾರಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,<br>ಕುಣಿಗಲ್ ತಾಲ್ಲೂಕು–9844716744. | ಶ್ರೀ ಕೆಂಚಪ್ಪ,<br>ಉಪತಹಶೀಲ್ದಾರ್,<br>ಕೊತ್ತಗೆರೆ ಹೋಬಳಿ,<br>ಕುಣಿಗಲ್ ತಾಲ್ಲೂಕು–9448856815. |
| 5. | ಪುರಸಭೆ<br>ಚಿಕ್ಕನಾಯಕನಹಳ್ಳಿ | 1 ರಿಂದ 7 | ಶ್ರೀ ಮಾರುತಿ,<br>ವಲಯ ಅರಣ್ಯಾಧಿಕಾರಿ,<br>ಚಿಕ್ಕನಾಯಕನಹಳ್ಳಿ ತಾಲ್ಲೂಕು<br>–9449667324. | ಶ್ರೀ ದೊಡ್ಡಯ್ಯ,<br>ಎಸ್.ಎಸ್.ವೈ. ಶಿರಸ್ತೇದಾರ್, ತಾಲ್ಲೂಕು ಕಛೇರಿ,<br>ಚಿಕ್ಕನಾಯಕನಹಳ್ಳಿ.–9731068944. |
| | | 8 ರಿಂದ 15 | ಶ್ರೀ ಎಂ.ಪಿ.ಶಶಿಕುಮಾರ್,<br>ಸಹಾಯಕ ನಿರ್ದೇಶಕರು,<br>ಪಶುಸಂಗೋಪನಾ ಇಲಾಖೆ,<br>ಚಿಕ್ಕನಾಯಕನಹಳ್ಳಿ, ತಾಲ್ಲೂಕು<br>–9880996030. | ಶ್ರೀ ಮಂಜುನಾಥ್,<br>ಆಹಾರ ಶಿರಸ್ತೇದಾರ್,<br>ತಾಲ್ಲೂಕು ಕಛೇರಿ,<br>ಚಿಕ್ಕನಾಯಕನಹಳ್ಳಿ. |
| | | 16 ರಿಂದ 23 | ಶ್ರೀ ಅನೀಸ್ ಖೈಸರ್,<br>ಶಿಶು ಅಭಿವೃದ್ಧಿ ಯೋಜನಾಧಿಕಾರಿ,<br>ಚಿಕ್ಕನಾಯಕನಹಳ್ಳಿ ತಾಲ್ಲೂಕು.<br>–9036421593. | ಶ್ರೀ ಹೆಚ್.ಬಿ.ಬಸವರಾಜು,<br>ಉಪತಹಶೀಲ್ದಾರ್,<br>ನಾಡ ಕಛೇರಿ, ಹುಳಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು. |
| 6. | ಪುರಸಭೆ<br>ಮಧುಗಿರಿ | 1 ರಿಂದ 8 | ಶ್ರೀ ತಿಪ್ಪೇಸ್ವಾಮಿ,<br>ಸಹಕಾರ ಸಂಘಗಳ ಸಹಾಯಕ ನೊಂದಣಾಧಿಕಾರಿ,<br>ಮಧುಗಿರಿ. –9343010274. | ಶ್ರೀ ಗಿರಿಯಪ್ಪ,<br>ಉಪತಹಶೀಲ್ದಾರ್,<br>ನಾಡ ಕಛೇರಿ, ಐ.ಡಿ.ಹಳ್ಳಿ,<br>ಮಧುಗಿರಿ ತಾಲ್ಲೂಕು. |
| | | 9 ರಿಂದ 15 | ಶ್ರೀ ಎಂ.ವಿ.ಶಿವಕುಮಾರ್,<br>ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ,<br>ಮಧುಗಿರಿ ತಾಲ್ಲೂಕು.–9480843201. | ಶ್ರೀ ದಾಸಪ್ಪ,<br>ಉಪತಹಶೀಲ್ದಾರ್, ಪುರವರ ಹೋಬಳಿ,<br>ಮಧುಗಿರಿ ತಾಲ್ಲೂಕು–8453788756. |
| | | 16 ರಿಂದ 23 | ಶ್ರೀ ರಾಮಕೃಷ್ಣಯ್ಯ,<br>ಕ್ಷೇತ್ರ ಶಿಕ್ಷಣಾಧಿಕಾರಿ,<br>ಮಧುಗಿರಿ ತಾಲ್ಲೂಕು, ಮಧುಗಿರಿ<br>–9480695356. | ಶ್ರೀ ರಂಗಸ್ವಾಮಿ,<br>ಉಪತಹಶೀಲ್ದಾರ್, ದೊಡ್ಡೇರಿ ಹೋಬಳಿ, ಮಧುಗಿರಿ ತಾಲ್ಲೂಕು<br>–9901750875. |
| 7. | ಪುರಸಭೆ<br>ಪಾವಗಡ | 1 ರಿಂದ 8 | ಶ್ರೀ ಶ್ರೀಧರ್,<br>ಸಹಾಯಕ ಕೃಷಿ ನಿರ್ದೇಶಕರು,<br>ಪಾವಗಡ –9342827077,<br>9591987415. | ಶ್ರೀ ವರದರಾಜು,<br>ಉಪ ತಹಶೀಲ್ದಾರ್, ವೈ.ಎನ್.ಹೊಸಕೋಟೆ ಹೋಬಳಿ, ಪಾವಗಡ ತಾಲ್ಲೂಕು–9448747834. |

| ಕ್ರ. ಸಂ | ನಗರ ಸ್ಥಳೀಯ ಸಂಸ್ಥೆಗಳ ಹೆಸರು | ವಾರ್ಡ್‌ಗಳ ಸಂಖ್ಯೆ | ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ | ಸಹಾಯಕ ಚುನಾವಣಾಧಿಕಾರಿಯಾಗಿ ಗೊತ್ತುಪಡಿಸಿರುವ ಅಧಿಕಾರಿ, ಪದನಾಮ ಮತ್ತು ಕಛೇರಿ |
|---|---|---|---|---|
| | | 9 ರಿಂದ 16 | ಶ್ರೀ ಬಿ.ರಂಗೇಗೌಡ,<br>ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ,<br>ಪಾವಗಡ ತಾಲ್ಲೂಕು–9480843202. | ಶ್ರೀ ನರಸಿಂಹಯ್ಯ,<br>ಉಪತಹಶೀಲ್ದಾರ್, ನಾಡಕಛೇರಿ, ನಾಗಲಮಡಿಕೆ,<br>ಪಾವಗಡ ತಾಲ್ಲೂಕು. –9742845569. |
| | | 17 ರಿಂದ 23 | ಶ್ರೀ ಬಿ.ಪಿ.ನಾಗರಾಜಪ್ಪ,<br>ಕ್ಷೇತ್ರ ಶಿಕ್ಷಣಾಧಿಕಾರಿ,<br>ಪಾವಗಡ ತಾಲ್ಲೂಕು, ಪಾವಗಡ.<br>–9480695357. | ಶ್ರೀ ಎ.ಮಾರಣ್ಣ,<br>ತಾಲ್ಲೂಕು ಶಿರಸ್ತೇದಾರ್, ತಾಲ್ಲೂಕು ಕಛೇರಿ,<br>ಪಾವಗಡ.<br>–9945099629. |
| 8. | ಪಟ್ಟಣ ಪಂಚಾಯತಿ ಗುಬ್ಬಿ | 1 ರಿಂದ 9 | ಶ್ರೀ ಪಿ.ಬಿ.ಬಸವರಾಜು,<br>ಕ್ಷೇತ್ರ ಶಿಕ್ಷಣಾಧಿಕಾರಿ,<br>ಗುಬ್ಬಿ ತಾಲ್ಲೂಕು,<br>ಗುಬ್ಬಿ–9480695353. | ಶ್ರೀ ಜಿ.ಪಿ.ರಾಜು,<br>ಉಪತಹಶೀಲ್ದಾರ್, ನಾಡಕಛೇರಿ,<br>ಹಾಗಲವಾಡಿ ಹೋಬಳಿ,<br>ಗುಬ್ಬಿ ತಾಲ್ಲೂಕು–9448950838. |
| | | 10 ರಿಂದ 17 | ಶ್ರೀ ಸೋಮಶೇಖರ್,<br>ಸಹಾಯಕ ನಿರ್ದೇಶಕರು,<br>ಅಕ್ಷರ ದಾಸೋಹ,<br>ತಾಲ್ಲೂಕು ಪಂಚಾಯತಿ,<br>ಗುಬ್ಬಿ ತಾಲ್ಲೂಕು, ಗುಬ್ಬಿ. | ಶ್ರೀ ಉಮಾಶಂಕರ್,<br>ಉಪತಹಶೀಲ್ದಾರ್, ನಾಡಕಛೇರಿ, ಚೇಳೂರು ಹೋಬಳಿ,<br>ಗುಬ್ಬಿ ತಾಲ್ಲೂಕು–9739682402. |
| 9. | ಪಟ್ಟಣ ಪಂಚಾಯತಿ ತುರುವೇಕೆರೆ | 1 ರಿಂದ 7 | ಶ್ರೀ ರಂಗಧಾಮಯ್ಯ,<br>ಕ್ಷೇತ್ರ ಶಿಕ್ಷಣಾಧಿಕಾರಿ,<br>ತುರುವೇಕೆರೆ ತಾಲ್ಲೂಕು–9480695361 | ಶ್ರೀ ದೊಡ್ಡಮಾರಯ್ಯ,<br>ಹಕ್ಕು ದಾಖಲೆ ಶಿರಸ್ತೇದಾರ್,<br>ತಾಲ್ಲೂಕು ಕಛೇರಿ, ತುರುವೇಕೆರೆ–9448660307. |
| | | 8 ರಿಂದ 14 | ಶ್ರೀ ಸತ್ಯನಾರಾಯಣ,<br>ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ,<br>ತುರುವೇಕೆರೆ ತಾಲ್ಲೂಕು, ತುರುವೇಕೆರೆ.<br>–9448885388. | ಶ್ರೀ ಶಶಿಧರ್,<br>ಉಪತಹಶೀಲ್ದಾರ್, ನಾಡಕಛೇರಿ,<br>ದಂಡಿನಶಿವರ ಹೋಬಳಿ,<br>ತುರುವೇಕೆರೆ ತಾಲ್ಲೂಕು. 9902905050. |
| 10 | ಪಟ್ಟಣ ಪಂಚಾಯತಿ ಕೊರಟಗೆರೆ | 1 ರಿಂದ 7 | ಶ್ರೀ ತಮ್ಮಣ್ಣ,<br>ಸಹಾಯಕ ಕಾರ್ಯಪಾಲಕ ಇಂಜಿನಿಯರ್,<br>ಲೋಕೋಪಯೋಗಿ ಇಲಾಖೆ ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪವಿಭಾಗ,<br>ಕೊರಟಗೆರೆ–9448520367. | ಶ್ರೀ ಶಿವಕುಮಾರ್,<br>ಉಪತಹಶೀಲ್ದಾರ್, ನಾಡಕಛೇರಿ,<br>ಹೊಳವನಹಳ್ಳಿ ಹೋಬಳಿ,<br>ಕೊರಟಗೆರೆ ತಾಲ್ಲೂಕು–9164499805. |
| | | 8 ರಿಂದ 14 | ಶ್ರೀ ಕೆ.ಆರ್.ಹೊನ್ನೇಶಪ್ಪ,<br>ಶಿಶು ಅಭಿವೃದ್ಧಿ ಯೋಜನಾಧಿಕಾರಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,<br>ಕೊರಟಗೆರೆ–9845733185 | ಶ್ರೀ ವೈ.ಸಿ.ರಾಮಕೃಷ್ಣಯ್ಯ<br>ಉಪತಹಶೀಲ್ದಾರ್,<br>ನಾಡಕಛೇರಿ, ಕೋಳಾಲ,<br>ಕೊರಟಗೆರೆ ತಾಲ್ಲೂಕು<br>–8951684386. |

ಮೇಲ್ಕಂಡ ಗೊತ್ತುಪಡಿಸಿದ ಅಧಿಕಾರಿಗಳು, ರಾಜ್ಯಚುನಾವಣಾ ಆಯೋಗದ ಸೂಚನೆಗಳಿಗನುಸಾರವಾಗಿ, ನೇಮಕಗೊಂಡಿರುವ ವಾರ್ಡುಗಳ ಚುನಾವಣೆಯನ್ನು ನಿಯಮಾನುಸಾರ ನಡೆಸತಕ್ಕದ್ದು.

**ಆರ್.ಕೆ. ರಾಜು**
ಜಿಲ್ಲಾಧಿಕಾರಿ,
ತುಮಕೂರು ಜಿಲ್ಲೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ - IV-A | ಬೆಂಗಳೂರು, ಗುರುವಾರ, ಫೆಬ್ರವರಿ ೭, ೨೦೧೩ (ಮಾಘ ೧೮, ಶಕ ವರ್ಷ ೧೯೩೪) | ನಂ. ೧೫೩ |
| Part - IV-A | Bangalore, Thursday, February 7, 2013 (Magha 18, Shaka Varsha 1934) | No. 153 |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 80 ಶಾಸನ 2012, ಬೆಂಗಳೂರು, ದಿನಾಂಕ: 07.02.2013**

ರೇವಾ ವಿಶ್ವವಿದ್ಯಾಲಯ ವಿಧೇಯಕ, 2012–ಇದಕ್ಕೆ 2013ರ ಫೆಬ್ರವರಿ ತಿಂಗಳ ಐದನೇ ದಿನಾಂಕದಂದು ಘನತೆವೆತ್ತ ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 13 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

### 2013 ರ ಕರ್ನಾಟಕ ಅಧಿನಿಯಮ ಸಂಖ್ಯೆ: 13

(2013ರ ಫೆಬ್ರವರಿ ಮಾಹೆಯ ಏಳನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ರೇವಾ ವಿಶ್ವವಿದ್ಯಾಲಯ ಅಧಿನಿಯಮ, 2012

(2013ರ ಫೆಬ್ರವರಿ ಮಾಹೆಯ ಐದನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಇಂಜಿನಿಯರಿಂಗ್, ಮಾನವಿಕ ವಿಷಯಗಳು, ವೈದ್ಯಕೀಯ, ಔಷಧ ವಿಜ್ಞಾನ, ತತ್ಸಂಬಂಧಿತ ಆರೋಗ್ಯ ವಿಜ್ಞಾನಗಳು, ವ್ಯವಹಾರ ಆಡಳಿತ ನಿರ್ವಹಣೆ, ಕೃಷಿ, ಶಿಕ್ಷಣ ಮತ್ತು ಅಂಥ ವಿಷಯಗಳಲ್ಲಿ ಪದವಿ, ಸ್ನಾತಕೋತ್ತರ, ಡಾಕ್ಟೋರೇಟ್ ಪದವಿ (doctoral) ಮತ್ತು ಡಾಕ್ಟೋರೇಟ್ ಪದವಿ ನಂತರದ ವ್ಯಾಸಂಗ ವಿಷಯಗಳ ಕೋರ್ಸುಗಳವರೆಗೆ ಮತ್ತು ಅವುಗಳನ್ನು ಒಳಗೊಂಡಂತೆ ತತ್ಸಂಬಂಧಿ ವಲಯಗಳಲ್ಲಿ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ವಿಶ್ವವಿದ್ಯಾಲಯದ ಶಿಕ್ಷಣದ ಪ್ರಗತಿಪರ ವಿಚಾರಗಳನ್ನು ಉತ್ತೇಜಿಸಲು ಮತ್ತು ಕೈಗೊಳ್ಳಲು ಖಾಸಗಿ ವಲಯದಲ್ಲಿ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದಕ್ಕಾಗಿ ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಇಂಜಿನಿಯರಿಂಗ್, ಮಾನವಿಕ ವಿಷಯಗಳು, ವೈದ್ಯಕೀಯ, ಔಷಧ ವಿಜ್ಞಾನ, ತತ್ಸಂಬಂಧಿತ ಆರೋಗ್ಯ ವಿಜ್ಞಾನಗಳು, ವ್ಯವಹಾರ ಆಡಳಿತ ನಿರ್ವಹಣೆ, ಕೃಷಿ, ಶಿಕ್ಷಣ ಮತ್ತು ಅಂಥ ವಿಷಯಗಳಲ್ಲಿ ಪದವಿ, ಸ್ನಾತಕೋತ್ತರ, ಡಾಕ್ಟೋರೇಟ್ ಪದವಿ (doctoral) ಮತ್ತು ಡಾಕ್ಟೋರೇಟ್ ಪದವಿ ನಂತರದ ವ್ಯಾಸಂಗ ವಿಷಯಗಳ ಕೋರ್ಸುಗಳವರೆಗೆ ಮತ್ತು ಅವುಗಳನ್ನು ಒಳಗೊಂಡಂತೆ ತತ್ಸಂಬಂಧಿ ವಲಯಗಳಲ್ಲಿ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ವಿಶ್ವವಿದ್ಯಾಲಯದ ಶಿಕ್ಷಣದ ಪ್ರಗತಿಪರ ವಿಚಾರಗಳನ್ನು ಉತ್ತೇಜಿಸಲು ಮತ್ತು ಕೈಗೊಳ್ಳಲು ಖಾಸಗಿ ವಲಯದಲ್ಲಿ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

### ಅಧ್ಯಾಯ – I

### ಪ್ರಾರಂಭಿಕ

1. **ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ರೇವಾ ವಿಶ್ವವಿದ್ಯಾಲಯ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಶೈಕ್ಷಣಿಕ ಪರಿಷತ್ತು (ಅಕೆಡೆಮಿಕ್ ಕೌನ್ಸಿಲ್)" ಎಂದರೆ, 25ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ವಿಶ್ವವಿದ್ಯಾಲಯದ ಶೈಕ್ಷಣಿಕ ಪರಿಷತ್ತು;

(ಬಿ) "ಕಾರ್ಯಸೂಚಿ ವಿಷಯಗಳು", ಎಂದರೆ, ಪರಿನಿಯಮಗಳಲ್ಲಿ ಹೆಸರಿಸಬಹುದಾದ ಮತ್ತು ಒಂದು ಸಭೆಯಲ್ಲಿ ಆ ವಿಷಯಗಳನ್ನು ಮತ್ತು ಕಲಾಪಗಳನ್ನು ಅನುಮೋದಿಸಬಹುದೆಂದು ತಮ್ಮ ಸಮ್ಮತಿ ಸೂಚಿಸಿ ಕುಲಾಧಿಪತಿಯವರು ಮುಂಚಿತವಾಗಿಯೇ ಲಿಖಿತ ಅನುಮೋದನೆಯನ್ನು ಕೊಟ್ಟಿದ್ದಾಗ ಮಾತ್ರವೇ ಸಂದರ್ಭಾನುಸಾರ ಪ್ರಬಂಧಕರ ಮಂಡಳಿ ಅಥವಾ ವ್ಯವಸ್ಥಾಪನಾ ಮಂಡಳಿ ಅಥವಾ ಯಾವುದೇ ಸಮಿತಿಯವರು ಕಾರ್ಯಸೂಚಿಯಲ್ಲಿ ಸೇರಿಸಬಹುದಾದ ಅಥವಾ ಸಭೆಯಲ್ಲಿ ಚರ್ಚೆಗೆ ತೆಗೆದುಕೊಂಡು ನಿರ್ಣಯವನ್ನು ಕೊಡಬಹುದಾದ ಎಲ್ಲಾ ವಿಷಯಗಳು ಮತ್ತು ಕಲಾಪಗಳು;

(ಸಿ) "ಪ್ರಬಂಧಕರ ಮಂಡಳಿ" ಎಂದರೆ, 23ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಪ್ರಬಂಧಕರ ಮಂಡಳಿ;

(ಡಿ) "ವ್ಯವಸ್ಥಾಪನಾ ಮಂಡಳಿ" ಎಂದರೆ, 24ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಆಡಳಿತ ಮಂಡಳಿ;

(ಇ) "ಕುಲಾಧಿಪತಿ", "ಕುಲಪತಿ", "ಸಹಕುಲಪತಿ" ಎಂದರೆ, ಅನುಕ್ರಮವಾಗಿ ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ ಮತ್ತು ಸಹಕುಲಪತಿ;

(ಎಫ್) "ಕ್ಯಾಂಪಸ್" ಎಂದರೆ, ಅದು ಎಲ್ಲಾದರೂ ಇರಲಿ ವಿಶ್ವವಿದ್ಯಾಲಯವು ಸ್ಥಾಪಿಸಿದ, ನಿರ್ವಹಿಸುವ ಒಂದು ಕ್ಯಾಂಪಸ್;

(ಜಿ) "ಸಮಿತಿಗಳು" ಎಂದರೆ, ಈ ಅಧಿನಿಯಮದಡಿಯಲ್ಲಿ ರೂಪಿಸಲಾದ ಸಮಿತಿಗಳು ಅಥವಾ ಸಂದರ್ಭಾನುಸಾರವಾಗಿ ವಿಶ್ವವಿದ್ಯಾಲಯದ ವಿವಿಧ ಕಾರ್ಯಕರ್ತರು ರಚಿಸಿರುವ ಸಮಿತಿಗಳು ಮತ್ತು ಅದರಲ್ಲಿ ನಾಮನಿರ್ದೇಶನ ಸಮಿತಿ, ಹಣಕಾಸು ಸಮಿತಿ, ದೂರಶಿಕ್ಷಣ ಸಮಿತಿ ಮತ್ತು ಅಂಥ ಇತರ ಸಮಿತಿಗಳು ಒಳಗೊಳ್ಳುತ್ತವೆ;

(ಎಚ್) "ಘಟಕ ಕಾಲೇಜು" ಎಂದರೆ, ವಿಶ್ವವಿದ್ಯಾಲಯವು ಸ್ಥಾಪಿಸಿ ನಿರ್ವಹಿಸುತ್ತಿರುವ ಒಂದು ಕಾಲೇಜು ಅಥವಾ ಸಂಸ್ಥೆ;

(ಐ) "ಹಣಕಾಸು ಸಮಿತಿ" ಎಂದರೆ, 27ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಹಣಕಾಸು ಸಮಿತಿ;

(ಜೆ) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಕೆ) "ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳು" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ, ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತು, ಭಾರತೀಯ ವೈದ್ಯಕೀಯ ಪರಿಷತ್ತು, ಭಾರತೀಯ ಔಷಧ ವಿಜ್ಞಾನ ಪರಿಷತ್ತು, ಭಾರತೀಯ ಕೃಷಿ ಸಂಶೋಧನಾ ಪರಿಷತ್ತು, ರಾಷ್ಟ್ರೀಯ ಮೌಲ್ಯಮಾಪನ ಮತ್ತು ಅಧಿಮಾನ್ಯತಾ ಪರಿಷತ್ತು, ರಾಷ್ಟ್ರೀಯ ಬೋಧಕ ಶಿಕ್ಷಣ ಪರಿಷತ್ತು, ದೂರಶಿಕ್ಷಣ ಪರಿಷತ್ತು, ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನಾ ಪರಿಷತ್ತು ಮುಂತಾದ, ಉನ್ನತ ಶಿಕ್ಷಣದಲ್ಲಿ ಗುಣಮಟ್ಟದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುವುದಕ್ಕಾಗಿ ಗುಣಮಟ್ಟಗಳು ಮತ್ತು ಷರತ್ತುಗಳನ್ನು ವಿಧಿಸುವುದಕ್ಕಾಗಿ, ಕೇಂದ್ರ ಸರ್ಕಾರವು ಸ್ಥಾಪಿಸಿರುವ ಒಂದು ಸಂಸ್ಥೆ ಮತ್ತು ಇದರಲ್ಲಿ ಸರ್ಕಾರವೂ ಸೇರಿರುತ್ತದೆ;

(ಎಲ್) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದಡಿಯಲ್ಲಿ ಸರ್ಕಾರವು ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಎಂ) "ಒಂದು ಘಟಕ ಕಾಲೇಜಿಗೆ ಸಂಬಂಧಪಟ್ಟಂತೆ ಪ್ರಾಂಶುಪಾಲರು" ಎಂದರೆ, ಘಟಕ ಕಾಲೇಜಿನ ಮುಖ್ಯಸ್ಥರು ಮತ್ತು ಪ್ರಾಂಶುಪಾಲರು ಇಲ್ಲದಿದ್ದಲ್ಲಿ ಅಥವಾ ನೇಮಕವಾದ ಪ್ರಾಂಶುಪಾಲರ ಗೈರುಹಾಜರಿಯಲ್ಲಿ, ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಲು ತಾತ್ಕಾಲಿಕವಾಗಿ ನೇಮಕಗೊಂಡಿರುವ ಉಪಪ್ರಾಂಶುಪಾಲರು ಅಥವಾ ಯಾವುದೇ ಇತರ ವ್ಯಕ್ತಿಯೂ ಇದರಲ್ಲಿ ಒಳಗೊಳ್ಳುತ್ತಾರೆ;

(ಎನ್) "ಕುಲಸಚಿವರು" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವರು;

(ಒ) "ಪ್ರಾದೇಶಿಕ ಕೇಂದ್ರ" ಎಂದರೆ, ಯಾವುದೇ ಪ್ರದೇಶದಲ್ಲಿನ ಅಧ್ಯಯನ ಕೇಂದ್ರಗಳ ಕಾರ್ಯವನ್ನು ಸಮನ್ವಯಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಉದ್ದೇಶಕ್ಕಾಗಿ ಮತ್ತು ಅಂಥ ಕೇಂದ್ರಕ್ಕೆ ವ್ಯವಸ್ಥಾಪನಾ ಮಂಡಳಿಯು ವಹಿಸಿಕೊಡಬಹುದಾದ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸಿಕೊಂಡುಬರುವ ಒಂದು ಕೇಂದ್ರ;

(ಪಿ) ಈ ಅಧಿನಿಯಮಕ್ಕೆ ಸಂಬಂಧಿಸಿದಂತೆ "ಪ್ರಾಯೋಜಕ ಪ್ರಾಧಿಕಾರ" ಅಥವಾ "ಪ್ರಾಯೋಜಕ ಸಂಸ್ಥೆ" ಎಂದರೆ, ನ್ಯಾಸ;

(ಕ್ಯೂ) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ;

(ಆರ್) "ಪರಿನಿಯಮಗಳು" ಮತ್ತು "ವಿನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಅನುಕ್ರಮವಾಗಿ ವಿಶ್ವವಿದ್ಯಾಲಯದ ಪರಿನಿಯಮಗಳು ಮತ್ತು ವಿನಿಯಮಗಳು;

(ಎಸ್) "ಅಧ್ಯಯನ ಕೇಂದ್ರ" ಎಂದರೆ, ವಿದ್ಯಾರ್ಥಿಗಳಿಗೆ ಅಗತ್ಯವಾದ ಬುದ್ಧಿವಾದ, ಸಲಹೆಗಳನ್ನು ನೀಡುವ ಅಥವಾ ಇತರ ಯಾವುದೇ ನೆರವನ್ನು ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಮತ್ತು ನಿರ್ವಹಿಸಿಕೊಂಡುಬಂದ ಒಂದು ಕೇಂದ್ರ;

(ಟಿ) "ಅಧ್ಯಾಪಕರು" ಎಂದರೆ, ಒಬ್ಬ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಅಥವಾ ವಿಶ್ವವಿದ್ಯಾಲಯದಲ್ಲಿ ಅಥವಾ ಒಂದು ಘಟಕ ಕಾಲೇಜಿನಲ್ಲಿ ಬೋಧಿಸುವುದಕ್ಕೆ ಅಥವಾ ಸಂಶೋಧನೆ ನಡೆಸುವುದಕ್ಕೆ ಅಥವಾ ಸಂಶೋಧನೆಗೆ ಮಾರ್ಗದರ್ಶನ ನೀಡುವುದಕ್ಕೆ ನೇಮಕವಾದ ಅಂಥ ಇತರ ವ್ಯಕ್ತಿ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗವು ನಿಯಮಿಸಿದ ಗುಣಮಟ್ಟಗಳಿಗೆ ಅನುಸಾರವಾಗಿ ಇರುವ ಘಟಕ ಕಾಲೇಜಿನ ಪ್ರಾಂಶುಪಾಲರು ಇದರಲ್ಲಿ ಒಳಗೊಳ್ಳುತ್ತಾರೆ;

(ಯು) "ನ್ಯಾಸ" ಎಂದರೆ ರುಕ್ಮಿಣಿ ಶೈಕ್ಷಣಿಕ ಮತ್ತು ಧರ್ಮಾಥ ನ್ಯಾಸ ಇದು ನೋಂದಾಯಿತ ನ್ಯಾಸವಾಗಿದ್ದು ಮತ್ತು ಪ್ರಾಯೋಗಿಕ ಸಂಸ್ಥೆಯಾಗಿದೆ;

(ವಿ) "ವಿಶ್ವವಿದ್ಯಾಲಯ ಅನುದಾನಗಳ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 3) 4ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಆಯೋಗ;

(ಡಬ್ಲ್ಯೂ) "ವಿಶ್ವವಿದ್ಯಾಲಯ" ಎಂದರೆ, ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಿ ನಿಗಮಿತಗೊಳಿಸಲಾದ ರೇವಾ ವಿಶ್ವವಿದ್ಯಾಲಯ;

(ಎಕ್ಸ್) "ಸಂದರ್ಶಕರು" ಎಂದರೆ, 13ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಸಂದರ್ಶಕರು.

## ಅಧ್ಯಾಯ– II

## ವಿಶ್ವವಿದ್ಯಾಲಯ ಮತ್ತು ಪ್ರಾಯೋಜಕ ಸಂಸ್ಥೆ

**3. ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರಸ್ತಾವ.**– (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಅದಕ್ಕನುಸಾರವಾಗಿ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಹಕ್ಕನ್ನು ನ್ಯಾಸವು ಹೊಂದಿರತಕ್ಕದ್ದು.

(2) ನ್ಯಾಸವು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(3) ಪ್ರಸ್ತಾವನೆಯು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ನ್ಯಾಸದ ವಿವರಗಳೊಂದಿಗೆ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು;

(ii) ವಿಶ್ವವಿದ್ಯಾಲಯದ ವ್ಯಾಪ್ತಿ ಮತ್ತು ಸ್ಥಾನಮಾನ ಹಾಗೂ ಭೂಮಿಯ ಲಭ್ಯತೆ;

(iii) ಪ್ರಾರಂಭದ ದಿನಾಂಕದಿಂದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ವಿಶ್ವವಿದ್ಯಾಲಯವು ಕೈಗೊಳ್ಳಬೇಕೆಂದಿರುವ ಅಧ್ಯಯನ ಮತ್ತು ಸಂಶೋಧನಾ ಕಾರ್ಯಕ್ರಮಗಳ ಸ್ವರೂಪ ಮತ್ತು ಬಗೆಗಳು;

(iv) ಪ್ರಾರಂಭಿಸಬೇಕೆಂದು ಪ್ರಸ್ತಾಪಿಸಿರುವ ವ್ಯಾಸಂಗ ವಿಭಾಗಗಳು (ಫ್ಯಾಕಲ್ಟಿಗಳು), ಅಧ್ಯಯನ ಕ್ರಮಗಳು ಮತ್ತು ಸಂಶೋಧನೆಗಳ ಸ್ವರೂಪ;

(v) ಕಟ್ಟಡಗಳು, ಸಲಕರಣೆಗಳು ಮತ್ತು ರಚನಾ ಸೌಕರ್ಯಗಳನ್ನು ಒದಗಿಸುವಂಥ ಕ್ಯಾಂಪಸ್ ಅಭಿವೃದ್ಧಿ;

(vi) ಪ್ರಾರಂಭದ ದಿನಾಂಕದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಗಾಗಿ ಬಂಡವಾಳ ವೆಚ್ಚದ ಹಂತಗಳು;

(vii) ಬಾಬುವಾರು ಆವರ್ತಕ ವೆಚ್ಚ, ಆರ್ಥಿಕ ಮೂಲಗಳು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಗೆ ತಗಲುವ ಅಂದಾಜು ವೆಚ್ಚ;

(viii) ಸಂಪನ್ಮೂಲ ಸಂಗ್ರಹಣೆಗಾಗಿ ಯೋಜನೆ ಮತ್ತು ಅದಕ್ಕೆ ಬಂಡವಾಳದಿಂದ ತಗಲುವ ವೆಚ್ಚ ಹಾಗೂ ಪ್ರತಿಯೊಂದು ಮೂಲಕ್ಕೂ ಮರು ಸಂದಾಯ ಮಾಡುವ ರೀತಿ;

(ix) ವಿದ್ಯಾರ್ಥಿಗಳಿಂದ ಶುಲ್ಕ ವಸೂಲು ಮಾಡಿ ಆಂತರಿಕವಾಗಿ ನಿಧಿ ಸಂಗ್ರಹಿಸುವ ಯೋಜನೆ, ಸಲಹಾ ಸೇವೆ ಮತ್ತು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಂದ ನಿರೀಕ್ಷಿತ ವರಮಾನಗಳು ಮತ್ತು ಇತರ ನಿರೀಕ್ಷಿತ ವರಮಾನಗಳು;

(x) ಘಟಕವೊಂದಕ್ಕೆ ತಗಲುವ ವೆಚ್ಚದ ವಿವರಗಳು, ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಶುಲ್ಕ, ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿ ವೇತನದಲ್ಲಿ ನೀಡುವ ರಿಯಾಯಿತಿ ಅಥವಾ ವಿನಾಯತಿಯ ಪರಿಮಿತಿಯ ವಿವರಗಳನ್ನು ಮತ್ತು ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳಿಗೆ ಅಥವಾ ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳು ಪ್ರಾಯೋಜಿಸಿದ ವಿದ್ಯಾರ್ಥಿಗಳಿಗೆ ಮತ್ತು ಭಾರತವನ್ನುಳಿದು ಇತರ ರಾಷ್ಟ್ರಗಳ ವಿದ್ಯಾರ್ಥಿಗಳಿಗೆ ವಿಧಿಸತಕ್ಕ ಶುಲ್ಕದ ದರಗಳು ಬೇರೆ ಬೇರೆ ಇದ್ದಲ್ಲಿ ಅವುಗಳನ್ನು ಸೂಚಿಸುವ ಶುಲ್ಕ ರಚನೆಯ ವಿವರಗಳು;

(xi) ಸಂಬಂಧಪಟ್ಟ ವಿದ್ಯಾ ವಿಭಾಗದಲ್ಲಿ ಎಷ್ಟು ವರ್ಷಗಳ ಅನುಭವ ಮತ್ತು ಪರಿಣಿತಿಯನ್ನು ನ್ಯಾಸವು ದೊರಕಿಸಿಕೊಡಲಿದೆ ಹಾಗೂ ಅದರ ಹಣಕಾಸಿನ ಸಂಪನ್ಮೂಲಗಳು;

(xii) ವಿಶ್ವವಿದ್ಯಾಲಯದಲ್ಲಿರುವ ಅಧ್ಯಯನ ಕ್ರಮಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕಾಗಿ ಇರುವ ವ್ಯವಸ್ಥೆ;

(xiii) ವಿಶ್ವವಿದ್ಯಾಲಯವು ಸ್ಥಾಪನೆಯಾಗುವುದಕ್ಕೆ ಮೊದಲು ನೆರವೇರಿಸಬೇಕೆಂದು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದ ಅಂಥ ಇತರ ಷರತ್ತುಗಳ ನೆರವೇರಿಕೆಯ ಹಂತ.

(4) ಸ್ವೀಕರಿಸಿದ ಪ್ರಸ್ತಾವಗಳನ್ನು ಪರೀಕ್ಷಿಸಲು ರಾಜ್ಯ ಸರ್ಕಾರವು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ಪದನಿಮಿತ್ತ ಸದಸ್ಯರಾದ ಮೂರು ಸದಸ್ಯರುಗಳನ್ನು ಒಳಗೊಂಡ ಒಂದು ಪರಿಶೋಧನಾ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಅದು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಸ್ಥಾಪನೆ.**– (1) ರಾಜ್ಯ ಸರ್ಕಾರವು ಪರಿಶೋಧನಾ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಪರಿಶೀಲಿಸಿದ ತರುವಾಯ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ,–

(i) ನ್ಯಾಸವು ಸಾಕಷ್ಟು ಮೂಲ ಸೌಕರ್ಯದೊಂದಿಗೆ ವಿಶ್ವವಿದ್ಯಾಲಯವೊಂದನ್ನು ನಡೆಸಲು ಸಮರ್ಥವಾಗಿದೆ ಎಂದು ಅದು ಮನಗಂಡರೆ;

(ii) ಪ್ರದೇಶಕ್ಕನುಸಾರವಾಗಿ ಕೆಳಗೆ ನಿರ್ದಿಷ್ಟ ಪಡಿಸಿದ ವ್ಯಾಪ್ತಿಗೆ ಭೂಮಿಯ ಒಡೆತನವನ್ನು ಹೊಂದಿರತಕ್ಕದ್ದು, ಎಂದರೆ:–

(ಎ) ಭೂಮಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿತಿಯೊಳಗಿದ್ದರೆ ಇಪ್ಪತ್ತೈದು ಎಕರೆಗಳು;

(ಬಿ) ಭೂಮಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿತಿಯಿಂದ ಹೊರಗೆ ಇದ್ದು, ಆದರೆ ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಪ್ರದೇಶದ ಒಳಗೆ ಇದ್ದರೆ ನಲವತ್ತು ಎಕರೆಗಳು;

(ಸಿ) ಭೂಮಿಯು (ಎ) ಮತ್ತು (ಬಿ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳನ್ನು ಹೊರತುಪಡಿಸಿದ್ದರೆ ಅರವತ್ತು ಎಕರೆಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.

ಮೇಲೆ ನಿರ್ದಿಷ್ಟಪಡಿಸಿದ ಭೂಮಿಯು ಏಕ ಘಟಕ(ಸಿಂಗಲ್ ಬ್ಲಾಕ್) ದಲ್ಲಿರತಕ್ಕದ್ದು ಮತ್ತು ಇದು ಸಂಬಂಧಪಟ್ಟ ನ್ಯಾಸ / ಪ್ರತಿಷ್ಠಾನ / ಸಂಸ್ಥೆ / ವಿಶ್ವವಿದ್ಯಾಲಯದ ಹೆಸರಿನಲ್ಲಿರತಕ್ಕದ್ದು. 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಲಾದಂತೆ ನ್ಯಾಸವು ಒದಗಿಸಿದ ವಿವರಗಳ ಆಧಾರದ ಮೇಲೆ ಸರ್ಕಾರವು 47ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸಬೇಕೆಂದು ನ್ಯಾಸಕ್ಕೆ ನಿರ್ದೇಶನ ನೀಡಬಹುದು.

(2) ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಸ್ಥಾಪನೆಯ ತರುವಾಯ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, "ರೇವಾ ವಿಶ್ವವಿದ್ಯಾಲಯ" ಎಂಬ ಹೆಸರಿನ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ರಾಜ್ಯದಲ್ಲಿ ಸ್ಥಾಪಿಸುವುದಕ್ಕೆ ಮಂಜೂರಾತಿಯನ್ನು ನೀಡಬಹುದು.

(3) ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು ಬೆಂಗಳೂರು ಜಿಲ್ಲೆಯಲ್ಲಿ ಇರತಕ್ಕದ್ದು. ವಿಶ್ವವಿದ್ಯಾಲಯವು ತನ್ನ ಕ್ಯಾಂಪಸ್ಸುಗಳನ್ನು ಅಥವಾ ಪ್ರಾದೇಶಿಕ ಕೇಂದ್ರಗಳನ್ನು, ಅಧ್ಯಯನ ಕೇಂದ್ರಗಳನ್ನು ಕರ್ನಾಟಕದ ಯಾವುದೇ ಭಾಗದಲ್ಲಿ ಹೊಂದಿರತಕ್ಕದ್ದು ಮತ್ತು ಆ ಬಗ್ಗೆ ರಾಜ್ಯ ಸರ್ಕಾರದ ಪೂರ್ವಾನುಮತಿಯನ್ನು ಪಡೆದುಕೊಳ್ಳುವುದಕ್ಕೊಳಪಟ್ಟು ಹಾಗೂ ವಿಶ್ವವಿದ್ಯಾಲಯದ ಅನುದಾನ ಆಯೋಗದ ಗುಣಮಟ್ಟಗಳಿಗನುಸಾರವಾಗಿ ಹೊಂದಿರತಕ್ಕದ್ದು.

(4) ಮೊದಲ ಕುಲಾಧಿಪತಿಯವರು, ಮೊದಲ ಕುಲಪತಿಯವರು, ಪ್ರಬಂಧಕ ಮಂಡಳಿಯ ಮೊದಲ ಸದಸ್ಯರುಗಳು, ವ್ಯವಸ್ಥಾಪನಾ ಮಂಡಳಿಯ ಹಾಗೂ ಶೈಕ್ಷಣಿಕ ಪರಿಷತ್ತಿನ ಮೊದಲ ಸದಸ್ಯರುಗಳು ಮತ್ತು ಇನ್ನು ಮುಂದೆ, ಅಂಥ ಅಧಿಕಾರಿಗಳು ಅಥವಾ ಸದಸ್ಯರುಗಳಾಗಬಹುದಾದಂಥ ಎಲ್ಲಾ ವ್ಯಕ್ತಿಗಳು, ಅಂಥ ಪದ ಅಥವಾ ಸದಸ್ಯತ್ವವನ್ನು ಹೊಂದಿರುವುದು ಮುಂದುವರೆಯುವವರೆಗೆ, ಒಂದು ನಿಗಮಿತ ನಿಕಾಯವನ್ನು ರಚಿಸತಕ್ಕದ್ದು. ಮತ್ತು ಅದು ವಿಶ್ವವಿದ್ಯಾಲಯದ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

(5) (2)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಗೆ ಮಂಜೂರಾತಿಯಾದ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ, ನ್ಯಾಸವು ಆರ್ಜಿಸಿದ, ಸೃಜಿಸಿದ, ಏರ್ಪಾಟು ಮಾಡಿಕೊಂಡ ಅಥವಾ ಕಟ್ಟಲ್ಪಟ್ಟ ಭೂಮಿ ಮತ್ತು ಇತರ ಸ್ಥಿರ ಮತ್ತು ಚರ ಸ್ವತ್ತು, ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(7) ವಿಶ್ವವಿದ್ಯಾಲಯದಲ್ಲಿನ ಭೂಮಿ, ಕಟ್ಟಡ ಮತ್ತು ಇತರ ಸ್ವತ್ತುಗಳನ್ನು ವಿಶ್ವವಿದ್ಯಾಲಯದ ಉದ್ದೇಶಗಳಿಗೆ ಆನುಷಂಗಿಕವಾಗಿರುವುದನ್ನು ಹೊರತುಪಡಿಸಿ ಇತರ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

**5. ಅನುದಾನಗಳು ಮತ್ತು ಹಣಕಾಸು ನೆರವು.–** ವಿಶ್ವವಿದ್ಯಾಲಯವು ಸ್ವಂತ ಧನಮೂಲ ಉಳ್ಳದ್ದಾಗಿರತಕ್ಕದ್ದು ಮತ್ತು ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ಸಂಸ್ಥೆ ಅಥವಾ ನಿಗಮದಿಂದ ಯಾವುದೇ ನಿರ್ವಹಣಾ ಸಹಾಯ ಅನುದಾನ ಅಥವಾ ಯಾವುದೇ ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಅಥವಾ ಅದನ್ನು ಪಡೆಯಲು ಹಕ್ಕನ್ನು ಹೊಂದಿರತಕ್ಕದ್ದಲ್ಲ:

ಪರಂತು, ರಾಜ್ಯವು,–

(ಎ) ಇತರ ರಾಜ್ಯ ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವನ್ನು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆಗಳಿಗಾಗಿ; ಅಥವಾ

(ಬಿ) ಸರ್ಕಾರದಿಂದ ನೆರವನ್ನು ಪಡೆಯುವ ಯಾವುದೇ ನಿರ್ದಿಷ್ಟ ಸಂಶೋಧನೆ ಅಥವಾ ಕಾರ್ಯಕ್ರಮಗಳಿಗಾಗಿ; ಮತ್ತು

(ಸಿ) ರಾಜ್ಯ ಕಾರ್ಯನೀತಿಯ ಬದಲಾವಣೆಗೆ ಒಳಪಟ್ಟು ಅಥವಾ ಅನ್ಯಥಾ ಇದೇ ಬಗೆಯ ವಿಶ್ವವಿದ್ಯಾಲಯಗಳಿಗೆ ಅವಕಾಶವನ್ನು ಕಲ್ಪಿಸುವುದಕ್ಕೆ ಅಥವಾ ಅವುಗಳ ಪ್ರಯೋಜನಕ್ಕಾಗಿ,

– ಅನುದಾನದ ಮೂಲಕ ಅಥವಾ ಅನ್ಯಥಾ ಹಣಕಾಸು ಬೆಂಬಲವನ್ನು ಒದಗಿಸಬಹುದು:

ಮತ್ತು ಪರಂತು, ವಿಶ್ವವಿದ್ಯಾಲಯವು, ಯಾವುದೇ ಇತರ ಮೂಲದಿಂದ ಯಾವುದೇ ಆರ್ಥಿಕ ನೆರವನ್ನು ಸ್ವೀಕರಿಸಬಹುದು.

**6. ಘಟಕ ಕಾಲೇಜು, ಹೆಚ್ಚುವರಿ ಕ್ಯಾಂಪಸ್‌ಗಳು, ಪ್ರಾದೇಶಿಕ ಕೇಂದ್ರಗಳು ಅಥವಾ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದಕ್ಕೆ ಅಧಿಕಾರ.–** ವಿಶ್ವವಿದ್ಯಾಲಯವು ಸ್ಥಾಪನೆಯಾದ ತರುವಾಯ ಐದು ವರ್ಷಗಳನ್ನು ಪೂರ್ಣಗೊಳಿಸಿದ ನಂತರ, ವಿಶ್ವವಿದ್ಯಾಲಯ ಅನುದಾನ ಆಯೋಗದ ಮತ್ತು ಇತರ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಗುಣಮಟ್ಟಗಳಿಗೆ ಒಳಪಟ್ಟು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ವಿಶ್ವವಿದ್ಯಾಲಯವು, ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಹೆಚ್ಚುವರಿ ಕ್ಯಾಂಪಸ್‌ಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಹೊಂದಿರಬಹುದು.

**7. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ವಿಶ್ವವಿದ್ಯಾಲಯವು, ತನ್ನ ಭವಿಷ್ಯದ್‌ದೃಷ್ಟಿ ಮತ್ತು ಧ್ಯೇಯೋದ್ದೇಶಗಳನ್ನು ಸಾಧಿಸಲು ಈ ಮುಂದಿನಂತೆ ವಿವಿಧ ಬಗೆಯ ಕಾರ್ಯತಂತ್ರಗಳನ್ನು ಕೈಗೊಳ್ಳಬಹುದು:–

(i) ಪ್ರಜ್ಞಾವಂತ ಸಮಾಜದ ಸೃಜನೆಗಾಗಿ ಸಾಮಾಜಿಕವಾದ ಸುಸಂಬದ್ಧ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಸಂಶೋಧನೆ ಮತ್ತು ಬೋಧನೆಗಾಗಿ ಸುಭದ್ರ ನೆಲೆಗಟ್ಟನ್ನು ರೂಪಿಸುವುದು;

(ii) ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ನ್ಯಾಸಧಾರಿಗಳು ಯುಕ್ತವೆಂದು ಭಾವಿಸಬಹುದಾದಂಥ ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಇಂಜಿನಿಯರಿಂಗ್, ಮಾನವಿಕ ವಿಷಯಗಳು, ವೈದ್ಯಕೀಯ, ಔಷಧ ವಿಜ್ಞಾನ, ತತ್ಸಂಬಂಧಿತ ಆರೋಗ್ಯ ವಿಜ್ಞಾನಗಳು, ವ್ಯವಹಾರ ಆಡಳಿತ ನಿರ್ವಹಣೆ, ಕೃಷಿ, ಶಿಕ್ಷಣ ಮತ್ತು ಅಂಥ ಇತರ ವಿಷಯಗಳಲ್ಲಿ ಪದವಿ, ಸ್ನಾತಕೋತ್ತರ, ಡಾಕ್ಟೊರೇಟ್ ಪದವಿಯ (doctoral) ಮತ್ತು ಡಾಕ್ಟೊರೇಟ್ ಪದವಿ ನಂತರದ ವ್ಯಾಸಂಗ ವಿಷಯಗಳ ಕೋರ್ಸುಗಳವರೆಗೆ ಮತ್ತು ಅವುಗಳನ್ನು ಒಳಗೊಂಡಂತೆ ವಿಶ್ವವಿದ್ಯಾಲಯದ ಶಿಕ್ಷಣದ ಸುಧಾರಣೆಯನ್ನು ಬೆಂಬಲಿಸುವುದು, ಉತ್ತೇಜಿಸುವುದು ಮತ್ತು ಕೈಗೆತ್ತಿಕೊಳ್ಳುವುದು;

(iii) ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಗುಣಮಟ್ಟಗಳಿಗನುಸಾರವಾಗಿ ಶೈಕ್ಷಣಿಕ ಬದಲಾವಣೆ ಮತ್ತು ಸಾಮಾಜಿಕ ಹಾಗೂ ಮಾನವಾಭಿವೃದ್ಧಿ ಬಗ್ಗೆ ಅರಿವನ್ನುಂಟು ಮಾಡಲು ಮತ್ತು ಆ ಬಗ್ಗೆ ಕೊಡುಗೆ ನೀಡಲು ಕರ್ನಾಟಕದಲ್ಲಿನ ವಿವಿಧ

ಸ್ಥಳಗಳಲ್ಲಿ ಕ್ಯಾಂಪಸ್ಸುಗಳನ್ನು ಸ್ಥಾಪಿಸುವುದು ಮತ್ತು ಅಧ್ಯಯನ ಕೇಂದ್ರಗಳು, ಸಂಯೋಜಿತ ಕಾಲೇಜುಗಳು ಮತ್ತು ಪ್ರಾದೇಶಿಕ ಕೇಂದ್ರಗಳನ್ನು ಹೊಂದುವುದು;

(iv) ವಾಣಿಜ್ಯೋದ್ಯಮ ಮತ್ತು ವಾಣಿಜ್ಯೋದ್ಯಮಿಗೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸಲು ಸುಭದ್ರ ನೆಲೆಗಟ್ಟನ್ನು ರೂಪಿಸುವುದು ಮತ್ತು ಈಗಷ್ಟೆ ರೂಪುತಳೆಯುತ್ತಿರುವ ಕಂಪನಿಗಳಿಗೆ ಕಾರ್ಯತಂತ್ರದ ಸಲಹೆಗಳನ್ನು ಒದಗಿಸುವುದೂ ಒಳಗೊಂಡಂತೆ ಪ್ರಕರಣದ ಅಧ್ಯಯನಗಳನ್ನು ಅಭಿವೃದ್ಧಿಪಡಿಸುವುದು.

(v) ಮೌಲ್ಯಮಾಪನದ ವಿವಿಧ ಆಧುನಿಕ ವಿಧಾನಗಳ ಮೂಲಕ ಮಾಡಿದ ಮೌಲ್ಯಮಾಪನಕ್ಕೆ ಅನುಸಾರವಾಗಿ ಶಿಕ್ಷಣವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದುದರ ಆಧಾರದ ಮೇಲೆ ನೀಡಲು ಪದವಿಗಳನ್ನು, ಡಿಪ್ಲೋಮೋಗಳನ್ನು, ಪ್ರಮಾಣಪತ್ರಗಳನ್ನು ಮತ್ತು ಯಶೋಪತ್ರ ಪ್ರದಾನದಂಥ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು;

(vi) ವಿದ್ಯಾರ್ಥಿಗಳಿಗೆ, ಬೋಧಕ ವೃಂದದ (ಫ್ಯಾಕಲ್ಟಿ) ಸದಸ್ಯರಿಗೆ ಮತ್ತು ಇತರರಿಗೆ ನಿರ್ದಿಷ್ಟ ಶೈಕ್ಷಣಿಕ ಮತ್ತು ಸಂಶೋಧನಾ ಕಾರ್ಯಕ್ರಮಗಳನ್ನು, ತರಬೇತಿ ಕಾರ್ಯಕ್ರಮಗಳನ್ನು ಮತ್ತು ವಿನಿಮಯ ಕಾರ್ಯಕ್ರಮಗಳನ್ನು ಏರ್ಪಡಿಸುವುದಕ್ಕಾಗಿ ಇತರ ಯಾವುದೇ ವಿಶ್ವವಿದ್ಯಾಲಯಗಳು, ಸಂಶೋಧನಾ ಸಂಸ್ಥೆಗಳು, ಲಾಭರಹಿತ ಸಂಸ್ಥೆಗಳು, ಕೈಗಾರಿಕಾ ಸಂಸ್ಥೆಗಳು, ವೃತ್ತಿಪರ ಸಂಸ್ಥೆಗಳು ಅಥವಾ ಇತರ ಸಂಸ್ಥೆಗಳೊಂದಿಗೆ ಸಹಯೋಗವನ್ನು ಹೊಂದುವುದು;

(vii) ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ಉತ್ತಮ ಗುಣಮಟ್ಟದ ಇತರ ಯಾವುವೇ ವಿಶ್ವವಿದ್ಯಾಲಯಗಳೊಂದಿಗೆ ಸಹಭಾಗಿಗಳಾಗಿ ವಿಶ್ವವಿದ್ಯಾಲಯದ ಬೋಧಕ ವೃಂದ (ಫ್ಯಾಕಲ್ಟಿ) ಮತ್ತು ಸಂಶೋಧಕರ ಅಭಿವೃದ್ಧಿ ಮತ್ತು ತರಬೇತಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು;

(viii) ರಾಜ್ಯ ಸರ್ಕಾರದ ಪೂರ್ವ ಅನುಮೋದನೆಯೊಡನೆ, ಯಾವುದೇ ಸಂಸ್ಥೆಯೊಂದಿಗೆ ಸಹಯೋಗ ಹೊಂದಿ ಸಂಶೋಧನೆಯನ್ನು ನಡೆಸುವುದು ಮತ್ತು ಸಮರ್ಥನಗೊಳಿಸುವುದು;

(ix) ಅನ್ವೇಷಣಾ ಸಮಸ್ಯಾ ಪರಿಹಾರಗಳನ್ನು ಹುಡುಕುವುದನ್ನು ಮತ್ತು ಸೃಜನಾತ್ಮಕತೆಯನ್ನು ಉತ್ತೇಜಿಸುವುದಕ್ಕೆ ಸಂಶೋಧನೆದಲ್ಲಿ ವಿದ್ಯಾರ್ಥಿಗಳನ್ನು ನಿರತರನ್ನಾಗಿಸುವುದು;

(x) ಉನ್ನತ ಕಲಿಕೆಗೆ ಪ್ರವೇಶಾವಕಾಶಗಳನ್ನು ಮತ್ತು ನ್ಯಾಯ ನೀತಿಗೆ ಉತ್ತೇಜನ ನೀಡುವ ದೃಷ್ಟಿಯಿಂದ, ಕಲಿಕೆಯ ವಿಧಾನಗಳು ಮತ್ತು ಸ್ಥಳಗಳು, ವ್ಯಾಸಂಗ ಕ್ರಮಗಳ ಸಂಯೋಜನೆ, ದಾಖಲಾತಿಗಾಗಿ ಅರ್ಹತೆ, ಪ್ರವೇಶದ ವಯಸ್ಸು, ಪರೀಕ್ಷೆಯನ್ನು ನಡೆಸುವುದು ಮತ್ತು ಕಾರ್ಯಕ್ರಮಗಳ ನಿರ್ವಹಣೆಗೆ ಸಂಬಂಧಿಸಿದಂತೆ ನಮ್ಯವಾದ (ಫ್ಲೆಕ್ಸಿಬಲ್) ಮತ್ತು ಮುಕ್ತವಾದ, ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ಅನ್ವೇಷಣಾ ಪದ್ಧತಿಯನ್ನು ಅಳವಡಿಸುವುದು ಹಾಗೂ ಜ್ಞಾನದ ಹೊಸ ಕ್ಷೇತ್ರಗಳಲ್ಲಿ ಉತ್ಕೃಷ್ಟತೆಗೆ ಪ್ರೋತ್ಸಾಹಿಸುವುದು, ಶೈಕ್ಷಣಿಕ ಮತ್ತು ಸಮನ್ವಯ ಕಲಿಕೆ, ಇವೆರಡಕ್ಕೂ ಸಮನಾದ ಪ್ರಾಮುಖ್ಯತೆಯನ್ನು ನೀಡುವುದು;

(xi) ತನ್ನ ಕಾರ್ಯನೀತಿಗಳು ಮತ್ತು ಕಾರ್ಯಕ್ರಮಗಳ ಮೂಲಕ ರಾಷ್ಟ್ರೀಯ ಸಮಗ್ರತೆ ಮತ್ತು ಮಾನವ ವ್ಯಕ್ತಿತ್ವದ ಸಮಗ್ರ ವಿಕಾಸಕ್ಕೆ ಪ್ರೋತ್ಸಾಹಿಸುವುದು;

(xii) ರೋಗವನ್ನು ಗುಣಪಡಿಸುವುದು, ಪರಿಸರ ಸಂರಕ್ಷಣೆ ಮತ್ತು ಸುಧಾರಣೆ, ಪುನರ್ನವೀಕರಣಗೊಳ್ಳುವ ಇಂಧನ, ಸಮರ್ಥವಾದ ಕೈಗಾರಿಕಾ ಪದ್ಧತಿಗಳು, ವ್ಯವಹಾರ ನಿರ್ವಹಣೆ ಆಡಳಿತ ಮತ್ತು ಸಾಮಾಜಿಕ – ಆರ್ಥಿಕ ಅಭಿವೃದ್ಧಿಯಂಥ ಕ್ಷೇತ್ರಗಳಲ್ಲಿ ಆದರೆ ಅವುಗಳಿಗೆ ಮಾತ್ರ ಸೀಮಿತವಾಗಿರದೆ, ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ವಿವಿಧ ವಿದ್ಯಾ ವಿಭಾಗಗಳಲ್ಲಿ ವಿವಿಧ ಸಂಶೋಧನಾ ಕಾರ್ಯಕ್ರಮಗಳನ್ನು ಉತ್ತೇಜಿಸುವುದು ಮತ್ತು ಕೈಗೊಳ್ಳುವುದು;

(xiii) ಕೌಶಲಗಳಲ್ಲಿ ತೊಡಗುವುದಕ್ಕಾಗಿ ಕೈಗಾರಿಕೆಗಳಲ್ಲಿ ನಿಯೋಜಿತರಾದ ಜನರ ಶಿಕ್ಷಣದ ಮುಂದುವರಿಕೆಗಾಗಿ ಕಾರ್ಯಕ್ರಮಗಳನ್ನು ರೂಪಿಸುವುದು;

(xiv) ಕೈಗಾರಿಕಾ ಯೋಜನೆಗಳಲ್ಲಿ ವಿದ್ಯಾರ್ಥಿಗಳನ್ನು ಮತ್ತು ಬೋಧಕ ಸಿಬ್ಬಂದಿಯನ್ನು ನಿರತಗೊಳಿಸುವುದು;

(xv) ಸಮಾಲೋಚನ ಕಾರ್ಯಭಾರಗಳ ಮೂಲಕ ಕೈಗಾರಿಕೆಗಳ ಉತ್ಪಾದಕತೆಗೆ ಕೊಡುಗೆಯನ್ನು ನೀಡುವುದು;

(xvi) ಬೋಧನೆ ಮತ್ತು ಸಹಯೋಗದ ಮೂಲಕ ವಿದ್ಯಾರ್ಥಿಗಳಲ್ಲಿ, ಹಳೆ ವಿದ್ಯಾರ್ಥಿಗಳಲ್ಲಿ ಹಾಗೂ ಕೈಗಾರಿಕಾ ಪಾಲುದಾರರಲ್ಲಿ ಉದ್ಯಮಶೀಲತೆಯನ್ನು ಪ್ರೋತ್ಸಾಹಿಸುವುದು;

(xvii) ವಿಚಾರ ಗೋಷ್ಠಿಗಳು, ಕಾರ್ಯಾಗಾರಗಳು, ಉಪನ್ಯಾಸ ಮಾಲಿಕೆಗಳು, ಚರ್ಚೆಗಳು, ಸಮ್ಮೇಳನಗಳು, ನಿರಂತರ ಶಿಕ್ಷಣ ಕಾರ್ಯಕ್ರಮಗಳು, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳು, ಪ್ರಕಟಣೆಗಳು, ತರಬೇತಿ ಕಾರ್ಯಕ್ರಮಗಳು ಹಾಗೂ ಉದ್ಯಮಶೀಲತೆಯ ಮೂಲಕ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಪ್ರಾಮುಖ್ಯ ವಿಷಯಗಳ ಬಗ್ಗೆ ಸಾರ್ವಜನಿಕರು ಮತ್ತು ಖಾಸಗಿ ಆಹ್ವಾನಿತರಲ್ಲಿ ತಿಳುವಳಿಕೆ ಮತ್ತು ಸ್ಫೂರ್ತಿಯನ್ನು ವೃದ್ಧಿಗೊಳಿಸುವುದು;

(xviii) ಉದಾಹರಣೆಯ ಮೂಲಕ ಬೋಧನೆ, ಕಲಿಕೆ ಮತ್ತು ಮುನ್ನಡೆಯ ಮೂಲಕ ಸಾಮಾಜಿಕ ಉದ್ಯಮಶೀಲತಾ ಕಾರ್ಯಕ್ರಮಗಳನ್ನು ಅಭಿವೃದ್ಧಿಗೊಳಿಸುವುದು;

(xix) ಸಮಾಜದ ಗ್ರಾಮೀಣ ಮತ್ತು ನಗರ ವರ್ಗಗಳ ಅಭಿವೃದ್ಧಿಗೆ ಸಂಬಂಧಿಸಿದ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳುವುದು;

(xx) ಜಾಗತಿಕ ಜ್ಞಾನವನ್ನು ಒಟ್ಟುಗೂಡಿಸುವ ಮೂಲಕ ಗಂಭೀರ ಸಮಸ್ಯೆಗಳನ್ನು ಪರಿಹರಿಸಲು ಅಭಿವೃದ್ಧಿಶೀಲ, ಅನಭಿವೃದ್ಧಿ ಮತ್ತು ಅಭಿವೃದ್ಧಿ ಹೊಂದಿದ ರಾಷ್ಟ್ರಗಳೊಂದಿಗೆ ಸಹಹೋಗ.

